ಅಖಿಲಸೇವಾ ಗ್ರಂಥಮಾಲೆಯ ೧೦ನೆ ಕುಸುಮ

# ನಮ್ಮ ಕವಿತೆಗಳು



1939

ಮಿತ್ರಮಂಡಳಿ, ಮಂಗಳೂರು.

ಬೆಲೆ: ೧—೪—೦

ಸರಸ್ವತೀ ಪ್ರಿಂಟಿಂಗ್ ವರ್ಕ್ಸ್, ಲಿಮಿಟೆಡ್, ಮಂಗಳೂರು.

# ಎರಡು ಮಾತು

ಯುರೋಪಿನಲ್ಲಿ ಕಳೆದ ಮಹಾಯುದ್ಧವು ಮುಗಿದಂದಿನಿಂದ ಇವೇ ಇಪ್ಪತ್ತು ವರ್ಷಗಳಲ್ಲಿ ಜೀವನತತ್ವಗಳಲ್ಲಿ ಮಹತ್ವದ ತಿದ್ದುಪಾಟುಗಳು ಉಂಟಾಗಿವೆ. ಸಾಹಿತ್ಯವು ಜೀವನದ ಪ್ರತಿಬಿಂಬದಂತೆ ಇರುವುದು ಸಹಜವಾಗಿರುವ ಕಾರಣ, ಸಾಹಿತ್ಯತತ್ವಗಳಲ್ಲೂ ಬದಲಾವಣೆ ಉಂಟಾಗಿಯೇ ಇದೆ. ಇಪ್ಪತ್ತು ವರ್ಷಗಳ ಈಚೆಯ ಇಂಗ್ಲಿಷ ಸಾಹಿತ್ಯವು ಹಿಂದಣ ಯಾವ ಕಾಲದ ಸಾಹಿತ್ಯಕ್ಕಿಂತ ವಿಷಯನಿರೂಪಣೆ ವಿಸ್ತಾರ ವ್ಯಂಗ್ಯಾದಿಗಳಲ್ಲಿ ಪೃಥಕ್ಕಾಗಿದೆ ಎಂದೇ ತೋರುವುದು. ಈ ನವಯುಗವಾದರೂ ಅತಿ ತೀವ್ರವಾಗಿಯೆ ಪರಿವರ್ತನೆಗಳನ್ನುಂಟುಮಾಡುತ್ತಲಿದೆ. ವರ್ಷದಲ್ಲಿ ಅಲ್ಲೀಗ ಪ್ರಕಟವಾಗುವ, ದಿನಕ್ಕೆ ಏಳರಂತೇನೋ ವಿಮರ್ಶೆಗೆ ಒಪ್ಪಿಸಲಾಗುವ ಗ್ರಂಥಗಳಲ್ಲಿ, ವರ್ಷಾಂತ್ಯದಲ್ಲಿ ಮತ್ತೊಂದೆರಡು ವರ್ಷಗಳ ತನಕ ಬಾಳಬಹುದಾಗಿರುವ ಹತ್ತೆಂಟು ಗ್ರಂಥಗಳನ್ನು ಆರಿಸುವುದಕ್ಕಾದರೂ, ನೂತನತೆಗಿಂತ ಪ್ರತ್ಯೇಕತೆಯನ್ನೇ ನೋಡಿ ಇತ್ಯರ್ಥಿಸಬೇಕಾಗಿ ಬಂದದೆ. ಕಳೆದ ವರ್ಷದಲ್ಲಿ, ಒಂದೊಂದು ತಿಂಗಳಲ್ಲಿ ಒಂದೊಂದರಂತೆ ಮಾತ್ರ ಆಯಾ ತಿಂಗಳಲ್ಲಿ ಪ್ರಕಟವಾದ ಗ್ರಂಥಗಳಿಂದ ಪ್ರತ್ಯೇಕಿಸಿಟ್ಟವುಗಳಾದರೂ, ಒಂದರಂತೆ ಮತ್ತೊಂದಿಲ್ಲ: ಒಂದಕ್ಕಿಂತ ಮತ್ತೊಂದು ತತ್ವದಲ್ಲಿ ಮುಂದರಿದು, ಇನ್ನು ಮುಂದೆ ಸರಿಯಲು ದಾರಿ ತೋರಿಸಿರುವಂತಾಗಿದೆ.

ಶತಮಾನಗಳಿಂದೀಚೆಗೆ ವಿಶ್ವಾಸವನ್ನಿರಿಸಿದ್ದ ತತ್ವಗಳು, ಧ್ಯೇಯಗಳು, ಕಾರ್ಯಕ್ರಮಾದಿಗಳು ಮುಂತಾದುವು ಯಥಾರ್ಥವಾದುವಲ್ಲೆಂದು ಅಲ್ಲೇನೋ ನಾಗರಿಕ ಜಗತ್ತಿಗೆ ಆ ಮಹಾಯುದ್ಧಾರಂಭದಿಂದಲೂ ವ್ಯಕ್ತವೇ ಆಯಿತು; ಯುದ್ಧಾಂತ್ಯದಲ್ಲಿ ಹೊಸ ಮನುವೇ ಬಂದಲ್ಲದೆ, ಮುಂದೆ ನಿರ್ದೇಶಕರಿಲ್ಲೆಂಬಷ್ಟು ಕಠಿನ ಸತ್ಯವು ಮೂಡಿತು. ಉತ್ಪಾತಗಳಾಗಿದ್ದರೂ ಅಷ್ಟು ತೀವ್ರ ಜೀವನಗತಿಯಲ್ಲಿ ಪರಿವರ್ತನವುಂಟಾಗುತ್ತಿರಲಿಲ್ಲ; ಅಷ್ಟು ತೀಕ್ಷ್ಣವಾದ ರೀತಿಯಲ್ಲಿ ಜೀವನಚಕ್ರವು ಅಲ್ಲಿ ಉರುಳ ತೊಡಗಿತು. ಹಳೆಯ ನಂಬುಗೆಗಳು ಕೊಳೆತುವು; ಹಳೆಯ ಕಾರ್ಯಕ್ರಮಗಳು ಹುಳಿತುವು; ಹಳೆಯ ಮಾದರಿಗೆ ಕೇಳುವವರಿಲ್ಲವಾಯಿತು,

ಭಯಂಕರವಾದೊಂದು ಸ್ವಪ್ನದಿಂದ ಎಚ್ಚತ್ತು, ಮಿಥ್ಯಾವಸಾಯಿಗಳೆಂಬುವು ಗಳ ಇತ್ಯರ್ಥವಾಗಲೆಂಬ ಚಳವಳವೆದ್ದಿತು. ಪ್ರತಿಯೊಬ್ಬರೂ ವ್ಯಸ್ತರೇ ಆದ ಕಾರಣ, ಸಮಸ್ತರ ಕೇಳಿಕೆ ಅಷ್ಟೆಲ್ಲ ಭಿನ್ನಪ್ರಕಾರಗಳ ಸಾಹಿತ್ಯಕ್ಕೆ ಕಾರಣವಾಯಿತು. ಮರೆಮಾಜಿಲ್ಲದೆ, ಅಂತರಂಗ ಬಹಿರಂಗವೆಂದಿಲ್ಲದೆ, ಭಯದಾಕ್ಷಿಣ್ಯಗಳಿಲ್ಲದೆ, ಭೂತಕಾಲದ ಶಾಸನವನ್ನು ಅಳಿಸಿ, ಭವಿಷ್ಯತ್ಕಾಲ ಕ್ಕಾಗಿ ಶಾಸನಗಳಾಗಲೆಂಬ ಬಲವಾದ ಕೇಳಿಕೆ ಹೊರಟಿತು. ಹಿಂಪಣದರ ಗೌರವ ಕುಂದಿತು; ಯುರೋಪು ಯೌವನದ ಅಸ್ತಿವಾರದ ಮೇಲೆ— ಯೌವನಸಹಜವಾದ ಚಾಂಚಲ್ಯ ಉತ್ಸಾಹ ಆಸೆ ಆಕಾಂಕ್ಷೆಗಳ ದಕ್ಷತೆ ಯಿಂದ—ನಿರ್ಮಾಣಹೊಂದಬೇಕಾಯಿತು. ಯುದ್ಧಾಂತ್ಯದಲ್ಲಿ ಉಳಿ ದವರು,—ಪುರುಷಕರ್ಮಗಳಲ್ಲಿ ನಿರತರಾಗಲು ರಂಗಪ್ರವೇಶಮಾಡಿದ ಸ್ತ್ರೀಯರು, 'ಮಾಯಾ ಬಜಾರಿ'ನ ತೊಟ್ಟಿಲ ಕೂಸುಗಳು, ಅನಿರ್ದಿಷ್ಟ ವೀರರ ಸಮಾಧಿಗಳ ನಡುವಣಿಂದ ಸುಳಿದ ಮುದುಕರು—ಇವರಿಂದಾಗಿ, ನವಜೀವನ ನವಸಾಹಿತ್ಯಗಳಿಗೆ ಪೋಷಕವಾದ ವಸ್ತುಗಳು ದೊರೆತುವು. ಇವುಗಳ ತೀವ್ರಪ್ರಚಾರಕ್ಕಾಗಿ, ಕಿಂಚಿದವಕಾಶದೊಳಗೆ ಮನಃಪ್ರೇರೇಪಣೆ ಯಾಗಲೆಂದು, ಸಾಹಿತ್ಯಪ್ರಕಾರಗಳು ಲಘುರೂಪ ತಳೆದುವು. ಪ್ರಬಂಧ, ಕತೆ, ಕವಿತೆ, ನವಲುಗಳೆಲ್ಲಕ್ಕೂ ಸಂಕೋಚದೊಳಗೇ ಸಂಪೂರ್ಣತೆ ಯುಂಟಾಗುವ ಕಟ್ಟು ಉಂಟಾಯಿತೆನ್ನಬಹುದು.

ಮಂಗಳೂರು ಮಿತ್ರಮಂಡಳಿಯು ಜನ್ಮವೆತ್ತಿದ ಕಾಲಕ್ಕೆ, ಇವೆಲ್ಲ ನೂತನ ಸಾಹಿತ್ಯ ಪ್ರಕಾರಗಳು ಇತ್ತ ಪ್ರಕಟವಾಗಲು ಪ್ರಾರಂಭವಾಗಿತ್ತು. ವಿದ್ಯಾರ್ಥಿಗಳೇ ಅಧಿಕ ಸಂಖ್ಯೆಯಲ್ಲಿ ಸದಸ್ಯರಾಗಿರುವ ಈ ಮಂಡಳಿಯಲ್ಲಿ ಇತರ ಪ್ರಾಮುಖ್ಯ ಕರ್ತವ್ಯಗಳುಳ್ಳ ಸದಸ್ಯರು ಕನ್ನಡ ಸಾಹಿತ್ಯದ ಕಡೆಗೆ ಅಭಿಮಾನದಿಂದ ಮಾತ್ರ ದೊರೆತಷ್ಟು ಅವಕಾಶವನ್ನು ಸೇವೆಗೊಪ್ಪಿಸು ವಂತಾಯಿತು. ಈ ಸದಸ್ಯರಲ್ಲಿ ಇಂಗ್ಲಿಷ ಸಾಹಿತ್ಯದ (ಅಲ್ಪಸ್ವಲ್ಪವಾಗಿ ಯಾದರೂ) ಗೊತ್ತುಗುರಿ ತಿಳಿದವರು, ಹಿರಿಯರ ಬೋಧನೆಯನ್ನು ಅನುಸರಿಸಿಯೆ, ನೂತನ ಮಾದರಿಗಳನ್ನು ಬಳಕೆಗೆ ತರುವ ಪ್ರಯತ್ನ ಮಾಡಿದರು. ಆ ಪ್ರಯತ್ನಗಳು ಇನ್ನೂ ಮುಂದರಿದೇ ಬರುತ್ತವೆ, ಮುಂದರಿದೇ ಹೋಗುತ್ತಲಿರುವುವೆಂದಾಸೆ. ಈ ಪ್ರಯತ್ನಗಳ ಫಲವಾಗಿ ಈ ಗ್ರಂಥಮಾಲೆ. ಸಾಹಿತ್ಯದಲ್ಲಿ ಅದರಲ್ಲೂ, ನೂತನತೆಯ ಪ್ರಯತ್ನ

ಮಾಡುವ ಎಳೆಯ ಮಂಡಳಿಯಿಂದ ಬಳಿಕ, ಭಾಷಾಸೇವೆಯ ಹೆಸರಿಗಿಂತ ದರಿದ್ರನಾರಾಯಣನ ಉಪಾಸನೆಯ ಬಿರುದು ಮಂಡಳಿಗೆ ಸಲ್ಲುವುದುಚಿತ. ಆದರೆ, ಇಷ್ಟು ವರ್ಷ ದಾಟಿವೆ ಎಂದೇ ಇನ್ನು ಬಾಳುವುದು ಕಷ್ಟವಾಗ ದೆಂದು ಭರವಸೆಯಿಂದ ಹೇಳಬಹುದು.

ಈ ಕವಿತೆಗಳ ಸಂಗ್ರಹವಾದರೂ, ಮಿತ್ರಮಂಡಳಿಯ ಕಾರ್ಯ ಕ್ರಮಕ್ಕೆ ಸೇರಿದುದು ವಿಹಿತವಾಗಿದೆ. ಹದಿನೈದು ವರ್ಷಗಳಿಂದೀಚೆಗೆ ನಮ್ಮಲ್ಲಿ ಹೊಸಬಗೆಯ ಕವಿತೆಗಳನ್ನು ರಚಿಸುವವರ ಸಂಖ್ಯೆ ಬೆಳೆದೇ ಬಂದಿದೆ. ಇವರ ರಚನೆಗಳು ಪ್ರಕಟವಾಗುತ್ತಲೇ ಇದ್ದುವಾದರೂ, ಅವುಗಳ ಸಮಷ್ಟಿ ಇಲ್ಲ. ಒಬ್ಬಿಬ್ಬರು ತಮ್ಮ ಕವಿತೆಗಳನ್ನು ಕೂಡಿಸಿ ಪ್ರಕಟಿಸಿರಬಹುದು; ಆದರೆ, ಮಿಕ್ಕವರ ಪದ್ಯಪ್ರಚಾರಕ್ಕೆ ಪತ್ರಿಕಾದಿಗಳೇ ಆದರವನ್ನಿತ್ತಿವೆ ಹೊರತು, ಸ್ವತಂತ್ರವಾಗಿ ಅವನ್ನು ಪ್ರಕಟಿಸುವುದಕ್ಕೆ, ಓದುಗರ ಅಭಾವವೂ ಧನಬಲಿಯನ್ನೀಯಲು ಸಾಕಷ್ಟು ಸಾಹಸಪಡುವ ಧೈರ್ಯವು ಯಾರಲ್ಲಿಯೂ ಇಲ್ಲದಿರುವುದೂ ಆತಂಕಗಳಾಗಿವೆ. ಅದ ಕ್ಕಾಗಿ, ಇಂಗ್ಲಿಷ ಸಾಹಿತ್ಯಪ್ರಚಾರಕರು ನಾನಾ ರೂಪಗಳಿಂದ ಪದ್ಯಗಳನ್ನು ಶೇಖರಿಸಿ ಸುಲಭ ದರದಲ್ಲಿ ಸರ್ವರಿಗೂ ಒದಗುವ ಪ್ರಯತ್ನ ಮಾಡುತ್ತಿರು ವುದನ್ನು ನೋಡಿ, ಸಂಪೂರ್ಣ ನಷ್ಟವೆಂದೇ ತಿಳಿಯಬಹುದಾದಷ್ಟು ಹಣ ವನ್ನು ವ್ಯಯಿಸಿ ನಮ್ಮ ಹೊಸ ರಸಿಕರ ಪದ್ಯಗಳನ್ನು ಸಂಗ್ರಹಿಸಿ ಪ್ರಕಟಿಸ ಬೇಕೆಂದು ಮಿತ್ರಮಂಡಳಿ ನಿಶ್ಚಯಿಸಿತು. ನಮಗೆ ಪರಿಚಿತರಾಗಿರುವ ನಮ್ಮ ಕವಿಕೋಟಿಯಲ್ಲಿ ಸಮಸ್ತರಿಗೂ ಈ ಸಾಹಸಕಾರ್ಯದಲ್ಲಿ ನೆರ ವಾಗಲು ಬಿನ್ನವಿಸಿಕೊಂಡುದಕ್ಕೆ, ಆದರದಿಂದ ನಮಗೆ ಕೃತಿಗಳನ್ನು ಕಳಿಸಿ ಉಪಕಾರ ಮಾಡಿದವರನ್ನು ಕೃತಜ್ಞತೆಯಿಂದ ವಂದಿಸಿ, ಕವಿತೆಗಳನ್ನು ಇಲ್ಲಿ ಎಳೆಯರಿಂದ ಹಳಬರ ವರೆಗಣ ಸಾಲಿನಲ್ಲಿ ಪ್ರಕಟಿಸಿರುವೆವು. ಪ್ರತಿಯೊಬ್ಬರೂ ತಮ್ಮ ಮಾನಸಪ್ರತಿಮೆಗಳ ಪ್ರತಿಬಿಂಬಸ್ವರೂಪವಾಗಿ ತಮ್ಮ ಕೃತಿಸ್ಮಾರಕಗಳಾಗಿ ಯಾವುವು ಉಳಿಯಬಹುದಾಗಿ ಭಾವಿಸುವರೋ, ಅಂತಹ ಕೃತಿಗಳನ್ನು ಸಂಗ್ರಹಿಸಿ ನಮಗೆ ಕಳುಹಿರುವರು. ದಕ್ಷಿಣಕನ್ನಡ ದಲ್ಲಿ ಪದ್ಯರಚನೆಯ ಉದ್ಯಮದ ಪ್ರದರ್ಶನವೆಂಬಷ್ಟು ಚೆನ್ನಾಗಿ ಈ ಗ್ರಂಥವು ತೋರದಿರದು. ಮಿತ್ರಮಂಡಳಿಯ ಮೂಲಸ್ಥಾಪಕರಲ್ಲಿ ದಿವಂಗತ ರಾಘವಾಚಾರ್ಯರೂ ಒಬ್ಬರಾಗಿದ್ದರು; ಅವರ ಪದ್ಯಗಳನ್ನು

ಮೊದಲಲ್ಲಿಟ್ಟುದು ಯೋಗ್ಯವೆನಿಸದಿರದು, ಅಷ್ಟಾದರೂ ಚೆನ್ನಾಗಿ ಮಿತ್ರ ಮಂಡಳಿಯು ಅವರನ್ನು ಸ್ಮರಿಸದಿರಲಾದೀತೆ? ಅಂತೆಯೆ, ನಮ್ಮ ಮಂಡ ಳಿಯ ಹಿಂದಣ ಕಾರ್ಯದರ್ಶಿಗಳಲ್ಲಿ ಉತ್ಸಾಹಿ ತರುಣರಾಗಿದ್ದ ಶ್ರೀ। ಪಿ. ಸದಾನಂದ ನಾಯಕ್ ಇವರಿಗೆ, ಅವರ ಅಕಾಲನಿಧನದಿಂದ ಮಂಡಳಿ ಗಾದ ಸಂತಾಪವನ್ನು ಸೂಚಿಸಿ, ಈ ಗ್ರಂಥವನ್ನು ಅವರ ಸ್ಮಾರಕವಾಗಿ ಸಮರ್ಪಿಸಿರುವೆವು; ಇದೂ ಸಂಗತವೇ.

ಮಿತ್ರಮಂಡಳಿಯು ಪ್ರಕಟಿಸಿದ ಗ್ರಂಥಗಳು ಜನಾದರಕ್ಕೆ ಪಾತ್ರ ವಾಗಿವೆ; ಯುನಿವರ್ಸಿಟಿ ಅಥವಾ ಸರಕಾರದ ವಿದ್ಯಾ ಇಲಾಖೆ ನಮ್ಮನ್ನು ಸಾಕಷ್ಟು ಚೆನ್ನಾಗಿ ಪ್ರೋತ್ಸಾಹಿಸಿಯದೆ. ಕರ್ನಾಟಕದಲ್ಲೆಲ್ಲ ನಮ್ಮ ಪುಸ್ತಕಗಳು ಆದರಹೊಂದಿವೆ. ಅವುಗಳ ಯೋಗ್ಯತೆಗಿಂತ, ಮಂಡಳಿಯ ಪ್ರೋತ್ಸಾಹಕ್ಕಾಗಿ ಜನಾಶೀರ್ವಾದ ದೊರೆತಿದೆ ಎಂದು ಬಲ್ಲೆವು. ಈ ಪ್ರಕಟನೆಯೂ ಎಂದಿನಂತೆ ಹಿಂದಣ ವಾತ್ಸಲ್ಯವು ನಮ್ಮಲ್ಲಿ ಕನ್ನಡಿಗ ರಿಗೆ ಇರುವುದೆಂದು ನಂಬಿರುವ ಕಾರಣ, ವಿವಿಧ ರೀತಿಯಿಂದ ನಾವು ಮಾಡುವ ಗ್ರಂಥಪ್ರಕಟನಾದಿಗಳಲ್ಲಿ ನಮಗೆ ಬೆಂಬಲವಿರುವುದೆಂದೇ ವಿಶ್ವಾಸವನ್ನಿಡಬೇಕಾಗಿದೆ. ನಮ್ಮ ಕದಿರೆಯ ಕೆರೆಗಳಂತೆ, ಏಳೆಂಟು ಕೆರೆ ಗಳು ಒಂದರೊಳಗೊಂದು ನೀರನ್ನು ಹರಿಯಬಿಡುವಾಗ, ಒಂದು ಪ್ರಕಟನೆ ಯಿಂದ ನಮ್ಮ 'ಸಣ್ಣ ಖಜಾನೆ' ಬರಿದಾಗಬಹುದಾದರೂ, ಉಳಿದ ಹಲವು ಸ್ವಲ್ಪವಾದರೂ ಹಣ ತಂದೊಪ್ಪಿಸಿ ಅದನ್ನು ತುಂಬಿಸುವುವೆಂದೂ, ಹಣದ ಗೊಡೆವೆಯೆ ವಿಶೇಷವಾದಲ್ಲಿ ಸಾಹಿತ್ಯಪ್ರಚಾರವಾಗುವುದೇ ಕಠಿನವಾಗುವು ದೆಂದೂ ತಿಳಿದು ಈ ಬಗೆಯ ಯಜ್ಞಕ್ಕೊಪ್ಪಿದ್ದೇವೆ. ಸಾಹಸಕ್ಕಾದರೂ ಬೆಲೆ ಇದ್ದೇ ಇರುವುದೆಂದ ಬಳಿಕ, ಮಿತ್ರಮಂಡಳಿಯು ಸಾಹಿತ್ಯಪ್ರಚಾರ ಕ್ಕಾಗಿ ಸಾಹಸವಮಾಡಿದರೆ ಅನ್ಯಾಯವೆ, ಅನರ್ಥವೆ?

ಇಂತು ಸಜ್ಜನವಿಧೇಯ,

ಮಿತ್ರಮಂಡಳಿ ಮಂಗಳೂರು.
ತಾ. 8—3—1939.

M. N. KAMATH,
ಅಧ್ಯಕ್ಷ.



# ವಿಜ್ಞಾಪನೆ

ಈ ಗ್ರಂಥಕ್ಕೆ ತಮ್ಮ ಕವಿತೆಗಳನ್ನು ಧರ್ಮಬುದ್ಧಿಯಿಂದಲೂ ದಾನ ಬುದ್ಧಿಯಿಂದಲೂ ನೆರವಾಗಿ ಕೊಟ್ಟ ಸಮಸ್ತ ಕವಿಗಳಿಗೆ ಮತ್ತು ಪ್ರಕಾಶಕರಿಗೆ ಉಪಕಾರಸ್ಮರಣೆಯನ್ನೂ ಇವುಗಳಲ್ಲಿನ ಹೆಚ್ಚಿನ ಪದ್ಯಗಳನ್ನು ಈ ಮುಂಚೆ ತಮ್ಮ ತಮ್ಮ ಪತ್ರಿಕೆಗಳಲ್ಲಿ ಪ್ರಕಟಿಸಿದ ಪತ್ರಿಕಾ ಸಂಪಾದಕರಿಗೆ ಕವಿಗಳ ಪರವಾಗಿ ಆಭಾರಸೂಚನೆಯನ್ನೂ ಪುಸ್ತಕವನ್ನು ಅಚ್ಚುಕಟ್ಟಾಗಿ ಮುದ್ರಿಸಿಕೊಟ್ಟ ಶ್ರೀ। ಯು. ಗಣೇಶ ಶೆಣೈಯವರಿಗೆ ನಮ್ಮ ವಂದನೆಗಳನ್ನೂ ಸಮರ್ಪಿಸುತ್ತೇವೆ.

**ಜಿ. ವಿ. ಬಿ.**

## ಅಳಿಲಸೇವಾ ಗ್ರಂಥಮಾಲೆ

| | | | |
|---|---|---|---|
| ೧ | ಅಳಿಲ ಸೇವೆ | ೬ | ವಿನೋದ ಚಿತ್ರಗಳು |
| ೨ | ,, (ದ್ವಿತೀಯ ಖಂಡ) | ೭ | ಸಂಸಾರ |
| ೩ | ತಾಯ್ನಾಡು | ೮ | ಶಕುಂತಳೆ |
| ೪ | ಅಲರು | ೯ | ತರಂಗ |
| ೫ | ನಮ್ಮ ಕತೆಗಳು | ೧೦ | ನಮ್ಮ ಕವಿತೆಗಳು |

# ಕವಿಗಳ ಕ್ರಮಸೂಚಿ.

# ಕಾವ್ಯಗಳ ವರ್ಣಕ್ರಮಸೂಚಿ.

# ತಪ್ಪೊಪ್ಪೋಲೆ

| ಪುಟ | ಬಂತಿ | | ತಪ್ಪು | ಒಪ್ಪು |
|---|---|---|---|---|
| 2— | ೪ | ... | ಹಾ! ಶಿವ | ಹಾ ಶಿವಾ! |
| 4— | ೧೨ | ... | ಮಂಗಳದುಷೆ | ಮಾಂಗಲ್ಯದುಷಾ |
| 9— | ೩೫ | ... | ಇದು ತುಳುನಾಡಿನ ಹಂಪೆ, | ಇದು ಸೈ ತುಳುನಾಡಿನ ಹಂಪೆ! |
| 21— | ೧೬ | ... | ವಂದಿಸುವಳು | ವಂದಿಪಳು |
| 22— | ೧೦ | ... | ಹಸರಿಸಿದ | ಪಸರಿಸಿದ |
| 23— | ೨೨ | ... | ಹಸರಿಪ | ಪಸರಿಪ |
| 27— | ೧೫ | ... | ನೆಲೆಯರಿದಾ ಕಾಲ | ನೆಲೆಯರಿಯದಾ ಕಾಲ |
| 51— | ೧೬ | ... | ತಡೆದದನೊಡನೆಯು | ತಡೆದದನೊಡನೆಯೋ |
| 66— | ೫ | ... | ಮಾತೆಯಿವಳು ಹೋಗಲೆಂದು | ಹೋಗಲೆಂದು ಮಾತೆಯಿವಳು |
| 70— | ೧ | ... | ಬಂಧುಗಳಿರ! | 'ಬಂಧುಗಳಿರ! |
| 86— | ೨ | ... | ಹುರುಷ | ಹರುಷ |
| 91— | ೧೪ | ... | ಮುಬ್ಬಿಗೆ | ಮಬ್ಬಿಗೆ |
| 100— | ೯ | ... | ಹಾ | ಹಾಳು |
| | ೧೦ | ... | ಳು ಮುನಿಸು | ಮುನಿಸು |
| | ೧೫ | ... | ಹೃದಯ | ಹೃದಯದ |
| 104— | ೧೮ | ... | ವ್ರಂದ | ವೃಂದ |
| 107— | ೧೨ | ... | ನೊಂದಂತಿದ್ದರೂ | ನೊಂದಂತಿದ್ದರು |
| 108— | ೯ | ... | ಇದ್ದುದರಲತೃಪ್ತಿ | ಇದ್ದುದರಲಿ ಅತೃಪ್ತಿ |
| 116— | ೬ | ... | ಒಡೆನೆಯೋ | ಒಡನೆಯೋ |
| 118— | ೧೪ | ... | ರಿರುವರಭಿಮಾನ | ರಿರುವರವರಭಿಮಾನ |
| 129— | ೧ | ... | ವೈರಾಗ್ಯಕೇ | ವೈರಾಗ್ಯಕಂ |
| | ೩ | ... | ತ್ಯಾಗಕ್ಕೆಮೀ | ತ್ಯಾಗಕ್ಕಮಿ |
| | ೭ | ... | ಕಡುವಿಂ | ಕಡುಪಿಂ |

ಮಂಗಳೂರು ಮಿತ್ರಮಂಡಳಿಯ

ಕಾರ್ಯದರ್ಶಿಯರಾಗಿದ್ದ

**ದಿವಂಗತ ಪಾಂಗಾಳ ಸದಾನಂದ ನಾಯಕ,** ಬಿ. ಎಸ್‌ಸಿ.

ಇ ವ ರ

**ಪು ಣ್ಯ ಸ್ಮಾ ರ ಕ ವಾ ಗಿ**

ಕನ್ನಡದ ಹಿರಿಯರಿರ!
ಕನ್ನಡದ ಕಿರಿಯರಿರ!
    ಇದುವೆ ನಿಮಗಾಗಿ,
    ಇದು ನಾಳೆಗಾಗಿ.

ಕನ್ನಡದ ಮಕ್ಕಳಿರ,
ಕನ್ನಡದ ಮರಿಗಳಿರ,
ಕನ್ನಡದ ಈ ಚೆನ್ನು—
    ಇದುವೆ ನಿಮಗಾಗಿ,
    ಇದು ನಾಳೆಗಾಗಿ.

ಕನ್ನಡದ ತುಂಬಿಗಳು
ಪಡುವಲಿನ ತುಂಬಿಗಳು
ಮಧು ಪರಿಚ್ಛೇದಾನುಭವರು
ಸುಮದಿಂದ ಸುಮಗಳಿಗೆ
ರಸದಿಂದ ರಸಗಳಿಗೆ
ಹಿಂಡಾಗಿ ಹಾರಿಹರು ಇವರು.

    ಕನ್ನಡದ ಚೆಲುವೆಯರೆ,
    ಕನ್ನಡದ ಚೆನ್ನಿಗರೆ,
    ಕನ್ನಡದ ಈ ಚೆನ್ನು—
        ಇದುವೆ ನಿಮಗಾಗಿ
        ಇದು ನಾಳೆಗಾಗಿ.

## ದಿವಂಗತ ಕೆ. ರಾಘವಾಚಾರ್

### ೧ ಕರೆ

ತರುಣರೇ! ತಡವೇಕೆ ಮುಂಬರಿದು ಬನ್ನಿ.
ಮರಣವೇ ಜೀವನದ ಆರಂಭವೆನ್ನಿ.
ಹಿರಿಯರೇಂ ಕಾದಿ ಬಳಲಿದರೆ ಸೆರೆಯೊಳಿರೆ
ಕಿರಿಯರಿಲ್ಲವೆ ನಾವು ಕಾದಿ ಮಡಿಯುವರೆ?
ಬಲಿಗಂಜುವರೆ ತರುಣರೇಂ ಹಿಗ್ಗದಿಹರೆ?
ಕಲಿಗಂಜುವರೆ ತರುಣರೇಂ ಕುಗ್ಗಿರುವರೆ?
ತರುಣರೇ! ತಡವೇಕೆ ಮುಂಬರಿದು ಬನ್ನಿ.
ಮರಣವೇ ಜೀವನದ ಆರಂಭವೆನ್ನಿ.

### ೨ ತಾಯ್ನಾಡು

ಆವ ಪುಣ್ಯಗರ್ಭದಿಂದ ನಿನ್ನ ಜನುಮವಾಯಿತೋ
ಆವ ದುಗ್ಧಧಾರೆಯಿಂದ ನಿನ್ನ ದೇಹ ಬೆಳೆಯಿತೋ
ಆವ ಸವಿಯ ಸೊಲ್ಲ ಕೇಳಿ ನಿನ್ನ ಬಾಸೆಯುದಿಸಿತೋ
ಆವ ನಾಡಿನಗಲದಲ್ಲಿ ಬಾಲಲೀಲೆ ಕಳೆಯಿತೋ
ಮರೆತುಬಿಟ್ಟೆ ಮಾತೆಯಾ!
ಗುರುತುಗೆಟ್ಟೆ ಮಮತೆಯಾ!

ಅಧರದಮರ ಸ್ವಾದುಸುಖವ ಅಧರ ತಿಳಿವುದಲ್ಲವೆ?
ಹೃದಯದಡಿಯ ಮೂಕಭಾವ ಹೃದಯವರಿವುದಿಲ್ಲವೆ?
ಕೆದರಿ ಕುರುಳ ಹರಿದು ಅರಳ ಪವಡಿಸಿರುವ ಮಾತೆಯಾ
ಪದವಿಹೀನ ದೀನ ಹೀನ ದಶೆಯನರಿಯದಾದೆಯಾ!
ಮರೆತುಬಿಟ್ಟೆ ಮಾತೆಯಾ!
ಗುರುತುಗೆಟ್ಟೆ ಮಮತೆಯಾ!

ನಾಡ ಭಾಷೆ, ನಾಡ ವೇಷ, ನಾಡ ಕಲೆಗಳೆಲ್ಲವು
ಕಾಡಪಾಲುವಾದುವಯ್ಯೋ ಬಾಡಿಹೋಯ್ತು ದೇಹವು.
ಮೂಢ ಹೊಳೆಯ ತಡಿಯೊಳಲ್ಲಿ ತೋಡುವಂತೆ ಕೂಪವಾ
ನಾಡ ನಾಡಿಯರಿವು ನಿನ್ನೊಳುಳಿಯದಾಯ್ತು, ಹಾ! ಶಿವ
ಮರೆತುಬಿಟ್ಟೆ ಮಾತೆಯಾ!
ಗುರುತುಗೆಟ್ಟೆ ಮಮತೆಯಾ!

ಒರತೆ ಬತ್ತಿ ಮಾಯವಾಗಲೆಂತು ನದಿಯು ನಲಿವುದು?
ಕೊರತೆ ಹೆಚ್ಚಿ ಕೊರೆಯೆ ಮನವ ಹರುಷವೆಂತು ಹರಿವುದು?
ಕರುಳು ಹರಿದು ಹಂಚಿಹೋಗೆ ನಲ್ಮೆನೆರಳು ಸುಳಿವುದೆ?
ಮರುಳೆ! ಬಡವನಾದ ಪರಿಯು ಬಗೆಗೆ ಹರಿಯದಿರುವುದೆ?
ಮರೆತುಬಿಟ್ಟೆ ಮಾತೆಯಾ!
ಗುರುತುಗೆಟ್ಟೆ ಮಮತೆಯಾ!

ರೀತಿ, ನೀತಿ, ಸಮತೆ, ಮಮತೆ, ಸಭ್ಯತೆಗಳ ಕಲಿಸಿದಾ
ಪೂತ ಆರ್ಯ ಸಂಸ್ಕೃತಿಯನು ರಕ್ತದೊಳಗೆ ಬೆರಸಿದಾ
ಮಾತೆಯಮಲ ಕೀರ್ತಿಕೇತು ಹಾರುತಿರಲಿ ಸರ್ವದಾ
ಮಾತೃಪಾದತಲದ ಪುಣ್ಯರಜವ ಸೇವಿಸೈ ಸದಾ
ಮರೆತುಬಿಟ್ಟೆ ಮಾತೆಯಾ!
ಗುರುತುಗೆಟ್ಟೆ ಮಮತೆಯಾ!

"ಮಾತೆ! ಮಾತೆ!" ಕರೆದೊಡೇನು ಪ್ರೀತಿಭಾವವಾಯಿತೇ?
"ಮಾತೆ ಜಯತು" ಕೂಗಲೇನು ದೇಶದೇಳ್ಗೆಯಾಯಿತೇ?
ಜಾತಿಭೇದ ಸ್ವಾರ್ಥಭಿತ್ತಿಯೆಂದೊಡೇನು ತೀರಿತೇ?
ಮಾತೃಋಣದ ಭಾರದಿಂದ ನಿನಗೆ ಮುಕ್ತಿ ದೊರೆಯಿತೆ?
ಮರೆತುಬಿಟ್ಟೆ ಮಾತೆಯಾ!
ಗುರುತುಗೆಟ್ಟೆ ಮಮತೆಯಾ!

ಕರ್ಮಭೂಮಿಯಲ್ಲಿ ಮನುಜಜನ್ಮ ತಳೆದ ಮಾನವ!
ಕರ್ಮನಿರತನಾಗಿ ಸೇರು ಪುಣ್ಯಶಾಂತಿಧಾಮವ!
ಕರ್ಮಹೀನ ಮಾನವನಿಗೆ ಮುಕ್ತಿಮಾರ್ಗ ದೊರೆವುದೆ?
ಧರ್ಮಹೀನ ದರ್ಪಣದಲಿ ಮೊಗದ ಸೊಬಗು ತಿಳಿವುದೆ?
ಮರೆತುಬಿಟ್ಟೆ ಮಾಯೆಯಾ!
ಗುರುತುಗೆಟ್ಟೆ ಮಮತೆಯಾ!

ವಿಶ್ವಚಿತ್ರ ಅತಿವಿಚಿತ್ರ, ವಿಮಲ ಕಮಲ ಸದೃಶವು;
ವಿಶ್ವವನದ ವಿಹಗತತಿಯೊಳಿಲ್ಲ ವೈರಭಾವವು.
ಸಶ್ವರವಿದೆ ಮನುಜ! ನೀ ನಿಸರ್ಗದೇವಿ ವೀಣೆಯಾ
ವಿಶ್ವರಾಗರಸವ ಕುಡಿದು ಅಮರನಾಗಿ ಬಾಳಯ್ಯಾ!
ಮರೆತುಬಿಟ್ಟೆ ಮಾತೆಯಾ!
ಗುರುತುಗೆಟ್ಟೆ ಮಮತೆಯಾ!

ರಾಗಯನು ಕಂಡು ದಾರಿಗೆಟ್ಟು ದಣಿದ ಪಥಿಕಗೆ
ದಾರಿಮೋರು ನೀರಧಾರೆಯನ್ನು ಕಂಡ ಜೀವಿಗೆ
ತೋರು ಕರ್ಮಪಥವ, ಕಲಿಸೊ ಮಿಂಚಿನಿಂದ ಮಿರುಗಲು
ಕಾರ ಕತ್ತಲೆಯನು ಸೀಳಿ ಧೈರ್ಯಗೆಡದೆ ಹರಿಯಲು
ಮರೆತುಬಿಟ್ಟೆ ಮಾತೆಯಾ!
ಗುರುತುಗೆಟ್ಟೆ ಮಮತೆಯಾ!

ಧೂಳಿ ಪಾದತಳದಿ ಬಿದ್ದು ಹೊರಳಿ ನರಳಿಯಳುವುದು
ಗೋಳ ಕೇಳಿ ಗಾಳಿಯಿಳಿದು ತಬ್ಬಿಯುದ್ಧರಿಸುವುದು.
ಬಾಳ ಸವೆಸು ದೀನದಲಿತರೂಳಿಗದಲಿ ಮುದದೊಳು
ತೋಳ ತಳ್ಕೆಯಿಂದಲಾಗ ತಾಯಿ ತಬ್ಬಿ ತಣಿವಳು.
ಉದ್ಧರಿಸ್ಯೆ ಮಾತೆಯಾ!
ಬಿದ್ದಿರುವಾ ಮಾತೆಯಾ!

---

## ಪೇಜಾವರ ಸದಾಶಿವ ರಾವ್

### ೧ ಆಟಿಯ ಹುಣ್ಣಿಮೆ

ನಸುಕನು ಎತ್ತಿ ಬೆಳಕನು ಬಿತ್ತಿ
ಬಂದನು ರವಿ ಅರುಣಾಚಲ ಹತ್ತಿ.
ಉದಯದ ಗೀತ ಸುರಸಂಗೀತ
ಸೀಳುತ ಬರುವುದು ಸುರಭಿಯ ವಾತ.
ಎಲರಿನ ಸೊಂಪು ಅಲರಿನ ಕಂಪು
ಹರಿಸುತಲಿರುವುದು ಕಂಗಳ ಜೊಂಪು.
ಮುಗುಳುಗಳಧರವನು—ದಿನಪನು
ಚುಂಬಿಸಿ ಚದರುವನು!

ಎಳೆಬಿಸಿಲಿನ್ನು ನೆಲಜಲವನ್ನು
ತಬ್ಬುತ ಲೋಕವ ಬೆಳಗುವುದಿನ್ನು.
ಪಯಿರಿನ ತೆನೆಯು ಕಂಪಿನ ಮೊನೆಯು
ಮಂಗಳದುಷೆರಮಣಿಯ ಮನೆಯು.
ದುಂಬಿಯು ದಂಡು ಹಕ್ಕಿಯು ಹಿಂಡು
ಹಾರುತಲಿರುವುದು ಗಿಳಿವಿಂಡು.
ಎಳೆ ಬಿಸಿಲಾಡುತಿದೆ—ಈಗಲೆ
ಕತ್ತಲೆಯೋಡುತಿದೆ!

ಹಾಸನು ಬಿಟ್ಟು ಕುಂಕುಮವಿಟ್ಟು
ಬಾರೇ ಸೊಬಗಿನ ಸೀರೆಯನುಟ್ಟು.
ಹೂಗಳನಾಯ್ದು ತಳಿರನು ಕೊಯ್ದು
ಮರಳುವ ಪೂಜೆಗೆ ಮಾಲೆಯ ನೆಯ್ದು
ನೀನೈತಾರೇ ಮೋಹದ ನೀರೇ
ಆಟಿಯ ಹುಣ್ಣಿಮೆಯಾಟಕೆ ಬಾರೇ.
ಬೆಳಕದು ಏರುತಿದೆ—ಮೂಡಲು
ಕೆಂಪನು ಕಾರುತಿದೆ!

ಏನೀ ಹಜ್ಜೆ? ಏತಕೆ ಲಜ್ಜೆ?
ಎಲ್ಲಿ ಕಲಿತೆ ವೈಯಾರದ ಬಿಜ್ಜೆ?
ಆಟಿಯು ಮುಗಿಲು ಮಳೆಯುಲಿ ಮಿಗಿಲು
ನೋಡವೊ ನಭದಲಿ ಸಿಡಿಲಿನ ದಿಗಿಲು.
ಬಿಲ್ಲಿನ ಬಣ್ಣ ಕಟ್ಟಿದೆ ಕಣ್ಣ
ಬಾರೇ ಬಿಲ್ಲದು ಮುರಿಯುವ ಮುನ್ನ
ಕತ್ತಲೆ ಕೂಡಲಿದೆ—ರಯ್ಯನೆ
ಗಾಳಿಯು ತೀಡಲಿದೆ!

ಏನನು ಮರೆತೆ? ಸಿಂಗರದೊರತೆ!
ನಿನಗಿರುವದೆ ನಗನಟ್ಟಿನ ಕೊರತೆ?
ಕೊರಳಿನ ಸುತ್ತ ಹನಿಗಳ ಮುತ್ತ
ಪೋಣಿಸಿ ಕಟ್ಟುವೆ ನೀ ಬಾರಿತ್ತ.
ತಳಿರಿನ ಬಳೆಯು ಕಮಲದ ಕಳೆಯು
ತೊಡಿಸುತ ಕೊಯ್ಯುವೆ ಸೊಬಗಿನ ಬೆಳೆಯು.
ಗಗನವು ಮಳೆ ಸೂಸೆ—ನಿನಗಿದೆ
ಪನಿ ಕುಳಿರಿನ ಸೇಸೆ!

ವಾಸೂ ಶರದೂ ನಮ್ಮನು ಕರೆದು
ಬರದಿರೆ ಸಾರಿಹರೆಲ್ಲರ ತೊರೆದು.
ನೀನೂ ಸರಸೀ ನಮ್ಮನು ಅರಸಿ
ಸಿಗದಿರೆ ಹೊರಟರು ದಾರಿಯ ಮರೆಸಿ.
ಹೊಲವನು ಸಾರಿ ವನವನು ತೂರಿ
ತುಂಬಲು ಬುಟ್ಟಿಯು ಬೆಟ್ಟವನೇರಿ
ಹೂಗಳ ಹುಡುಕುವರು—ಗೆಳೆಯರು
ಹುಡುಕುತ ದುಡುಕುವರು!

ಆಟಿಯ ಹೂವು ಸೋಣದ ಹೂವು
ಕೆರೆಗಳ ನಡದಲಿ ಬೆಳೆದಿಹವು.
ಅರಳಿನ ಹೂವು ಹುರುಳಿಯ ಹೂವು
ಅಂಗಳದೆಡೆಯಲಿ ಅರಳಿಹವು.
ವಧುವಿನ ಹೂವು ಅದುರಿನ ಹೂವು
ವನದಲಿ ಸೊಬಗನು ತಳೆದಿಹವು.
ವಿಧ ವಿಧ ತಳಿರಿಹವು—ಹೊಸ್ತಿಲ
ಹೊದಿಸಲು ಸೊಬಗಿನವು!

ಹುಣ್ಣಿಮೆ ಸೊಂಪು ಹೂಗಳ ಕಂಪು
ಆಟಿಕೊಡಂಜಿಯ ಪದಗಳ ಇಂಪು
ಮಳೆಗಳ ಒಲವು ಬೆಳೆಗಳ ಚೆಲುವು
ಹರಿದೋಡುವ ಕೆರೆ ತೊರೆಗಳ ನಲವು
ಮುಗಿಲಿನ ಕಪ್ಪು ಬಿಸಿಲಿನ ಬೆಪ್ಪು
ಚೆಲುವಿನ ಶ್ರಾವಣ ತಿಂಗಳಿಗೊಪ್ಪು.
ತುಳುವರ ಹಬ್ಬವಿದು—ಹುಣ್ಣಿಮೆ
ಹಬ್ಬದ ಕಬ್ಬವಿದು.

## ೨ ಲಕ್ಕಣ

ಶ್ರಾವಣ ವಿಭವದ ವಸನವನುಟ್ಟು
ಬಿಂಕದಿ ನಿಂತಿದೆ ಬಾರ್ಕೂರು.
ಭೂಪತಿ ಪಾಂಡ್ಯ ದಿಗಂಬರ ಜೈನರ
ವಸತಿಯು ವಿಜಯದ ತವರೂರು.
ನಾಡಿಗರೊಲುಮೆಯು ಸೊಗದೂರು.
ಕಲಿಗಳಲಿ
ಕಲೆಗಳಲಿ
ಕಾಂತಿಯು ಕಲಶವು ಬಾರ್ಕೂರು
ಶಿಲ್ಪದ ಹುಟ್ಟೂರು!

ಕಲಕಲನಾದದಿ ನಲಿಯುವ ಸೀತೆಯು
ದಡದೆಡೆ ಜಿನಚೈತ್ಯಾಲಯವು
ಕಲ್ಲಲಿ ಕಾವ್ಯವ ಕೆತ್ತಿರುವಂತಿಹ
ನೆತ್ತಿಯನೆತ್ತಿಹ ಮಂಟಪವು
ಬಸದಿಗಳಿಂದ್ರರ ಗುರುಮಠವು
ಸ್ತಂಭಗಳು
ಬಿಂಬಗಳು
ಕಣ್ಣಿಗೆ ಶಿಲ್ಪದ ಹಬ್ಬಗಳು
ಕಲ್ಲಿನ ಕಬ್ಬಗಳು!

ಸೀತೆಯು ಶೀತಳ ವಾರಿಯು ನಾಟ್ಯಕೆ
ಲಕ್ಕಣ ಕವಿ ತಲೆದೂಗುವನು.
ಕಾಡಿನಲಲೆಯುತ ನಾಡಿನಲಾಡುವ
ಗಾಳಿಗೆ ಪುಲಕಿತನಾಗುವನು
ನಾಡಿನ ಸೊಬಗಿಗೆ ಬೀಗುವನು.
ನಲಿಯುವನು
ಒಲಿಯುವನು
ಹಾಡಿನ ಹೃದಯವ ತೆರೆಯುವನು
ತನ್ನನೆ ಮರೆಯುವನು.

ಕದನದಿ ಕಲಿಗಳು ಕಾದಿದ ಬಗೆಯನು
ಲಕ್ಕಣ ಕವಿ ತಾ ತಿಳಿದಿಹನು.
ವೀರ್ಯವ ತೋರಿದ ತೌಳವ ವೀರರ
ಕತೆಗಳ ಕಬ್ಬದಿ ಬರೆದಿಹನು.
ತುಳುಪದದಿ
ಪಾಡ್ದನದಿ
ಹಾಡಿಹನವ ರಣನೀತಿಯನು
ಸ್ಮಾರಕ ಗೀತಿಯನು.

ಕಬ್ಬಿಗ ಲಕ್ಕಣ ಹಾಡಿವನೆಂದರೆ
ಕಣ್ಣಲಿ ಕುಣಿವುದು ತುಳುನಾಡು!
ಭೈರವ ಚೌಟರ ಸಿರಿಸಾವಂತರ
ಅಜಿಲರ ಬಂಗರ ಚೆಲು ಬೀಡು!
ಕಲಿಗಳ ಕದನದ ಸವಿ ಹಾಡು!
ರಣಗೀತೆ
ವೀರಕತೆ
ಮೈ ನವಿರೇಳುವ ತುಳುಕಾವ್ಯ!
ಕೇಳಲು ಸುಶ್ರಾವ್ಯ!

ನಚ್ಚಿನ ಬೀರರ ರೊಚ್ಚಿನ ಮಾತಿಗೆ
ಪಟುಭಟರಬ್ಬರವೇಳುವುದು.
ನೋಡದೊ ಕಣದಲಿ! ತಾಳವ ರಟ್ಟರ
ಗೆಲುವಿನ ಜಯದನಿ ಕೇಳುವುದು!
ವೈರಿಗಳೆದೆಯುನು ಸೀಳುವುದು!
ಬಡಿಗೋಲು
ಮೊನೆವಿಲ್ಲು
ಕಾಣುತ ಕೆಚ್ಚದು ಚಿಮ್ಮುವುದು!
ಸ್ಫೂರ್ತಿಯು ಹೊಮ್ಮುವುದು!

ರಣದುತ್ಸಾಹವ ಕೈದುಗಳಾಟವ
ಕಾಣದೊ! ತನು ಬೆರಗಾಗುವುದು!
ನುಗ್ಗುವ ಬಂಟರ ಕೇಳಿಯು ಕೇಕೆಗೆ
ಉಕ್ಕಿನ ಮೈ ಮರುಳಾಗುವುದು!
ಕತ್ತಿಯು ಕೈ ಸರಳಾಗುವುದು!
ರಿಪುದಳದಿ
ಕೊಳಗುಳದಿ
ಹಾಹಾಕಾರವದೇಳುವುದು!
ಕೂಗದು ಕೇಳುವುದು!

ಕಾಲದ ಪರದೆಯು ಮೇಲಕ್ಕೆದ್ದಿತು
ಈಗದು ಹಿಂದಿನ ಚೆಲು ಕನಸು.
ಶತಮಾನಾಂತ್ಯದಿ ಮರೆತಿಹ ಲೋಕಕೆ
ಗತವೈಭವಗಳ ಸವಿ ನೆನಸು
ಭಾವನೆಯೂಟಕೆ ಸವಿ ತಿನಿಸು.
ನಿಜಧರ್ಮ
ಸತ್ಕರ್ಮ
ಮುಳುಗಿಹುದಂದಿನ ಜಲಧಿಯಲಿ
ಕತ್ತಲೆಯಾಳದಲಿ.

ತುಳುವರ ಕೀರ್ತಿಯು ಭೇರಿಯು ಮೊಳಗಿದ
ಬಾರ್ಕೂರೆಂಬುದು ಸುಡುಗಾಡ!
ಮಮತೆಯಲಾಡಿಸಿ ಭಾಗ್ಯದಿ ಬೆಳಸಿದ
ಸೀತೆಯ ಶಿಶುವಿಗೆ ಈ ಪಾಡ!
ನಾಡಿನ ಸೋಲಿಗೆ ಈ ಬೀಡ!
ಈ ಗತಿಯು
ಅವನತಿಯು
ಕಾಣುತ ಕವಿಗಳು ಕೊರಗುವರು
ಕಲಿಗಳು ಮರುಗುವರು.

ಕಾಲದ ಕಡಲಿನ ತೆರೆಗಳ ಹೊಡೆತಕೆ
ಬಳಲುತ ಮುಳುಗಿದೆ ಬಾರ್ಕೂರು.
ಕೂಗಿನ ತಾನಕೆ ಕುಣಿಯುವ ಅಳಿವಿನ
ಕಾಲಡಿ ಬಿದ್ದಿದೆ ಈಯೂರು.
ಬಾಳಿನಲಿ
ಬೀಳಿನಲಿ
ಇದು ತುಳುನಾಡಿನ ಹಂಪೆ
ಈಗಿದು ಕೊಳೆ ಕೊಂಪೆ.

ಮೌನದ ತೆರೆಯಲಿ ತೇಲುತ ಬಂದಿದೆ
ನಾಡಿಗೆ ಲಕ್ಕಣನನುರಕ್ತಿ
ಭೀಷಣವಾಂತಿಹ ವಿಲಯದ ಚಿತ್ರದಿ
ಮನವನು ಸೆಳೆವುದು ಆ ವ್ಯಕ್ತಿ!
ಕವಿಗಳಿಗಿರುವುದೆ ಈ ಶಕ್ತಿ!
ನೇಹದಲಿ
ಮೋಹದಲಿ
ಜಗವನು ಜಯಿಸುವ ಬಾಹುಬಲ
ವಿಜಯದ ಅತುಳ ಫಲ!

ಲಕ್ಕಣ ಕಟ್ಟಿದ ಪಾಷ್ಟನವೆಲ್ಲವು
ಜನತೆಯ ಹೃದಯವ ತೋರುವವು
ಕಾಲಾಘಾತದಿ ಲೋಕವು ಮರೆತಿಹ
ನಾಡಿನ ನಡೆಯನು ಸಾರುವವು
ಚರಿತೆಯ ಮೆಟ್ಟಲನೇರುವವು.
ತನಿರಸವ
ಸುರಿಸಿರುವ
ಕವಿಗಮರತ್ವವನಿತ್ತಿಹವು
ಭಕ್ತಿಯ ಬಿತ್ತಿಹವು.

## ೩ ನಾಟ್ಯೋತ್ಸವ

ಲೋರೆನ್ಸೊ ಇಲ್ ಮನ್ನೀಫಿಕೊ
ಹಾಡನರ್ಪಿಸಿಹೆನು ತಕೊ!
ಇಂದಿನೆಮ್ಮ ಉತ್ಸವದಲಿ
ಯೌವನದೀ ಸಂಭ್ರಮದಲಿ
ಹರಯವಿದರ ಯಾಗದಲ್ಲಿ
ಜೀವಿತಗಳ ಭೋಗದಲ್ಲಿ
ಗುರುವೆ ನಿನಗೆ ಅಗ್ರಪೀಠ
ಕಲಿತೆವಿಂದು ನಿನ್ನ ಪಾಠ!

ಕೇಲಿ ಬರುವ ಜಾಜ್ ಗಾನ
ನಮ್ಮ ಕುಣಿತಕಲ್ಲವೇನ!
ಅದೊ ದ್ರಾಕ್ಷೆರಸದ ಪಾನ—
ನಮ್ಮ ಕುಡಿತಕಲ್ಲವೇನ!
ವೆನೇತ್ಸಿಯದ ಕಡೆದ ಗಾಜು
ಸಾರ್ದೇನಿಯದ ಸುರೆಯ ಮೋಜು
ಮುತ್ತಿರುವರೆ ಕತ್ತಲು;
ಹಾಡಿನೊಡನೆ ಮೂಡಿ ಬರುವ
ಬೇರೆ ನಾಡ ಕನಸ ತರುವ
ಸೌರಭದಲಿ ಎತ್ತಲು
ಯೌವನವನು ಸೂಸುತಿರುವ
ಬಯಕೆಯನ್ನು ಬೀಸುತಿರುವ
ಸುಂದರಿಯರು ಸುತ್ತಲು!

ಯಾರೆ ನೀನು? ನಾನು ಸ್ಪಾನ್ಯ
ಅದು ಇತಾಲ್ಯ ಇದು ಜರ್ಮಾನ್ಯ.
ಯಾರೆ ನೀನು? ನಾನು ಫ್ರಾಂಚ.
ಮತ್ತೆ ನೀನೊ? ನಾನು ಗ್ರೀಚ.
ಮಿಂಚುತಿರುವ ರೇಶ್ಮೆಯಲ್ಲಿ
ಅರ್ಧ ಮುಚ್ಚಿ ಅರ್ಧ ಬಿಚ್ಚಿ
ಜಘನ ಧ್ವಜವ ಗಗನದಲ್ಲಿ
ವಿಜಯದಾಸೆಯಿಂದ ಚುಚ್ಚಿ
ಗಂಡಿಗಾಗಿ ಕಾಯುತಿರುವ
ಹೆಂಡು ಎದುರಿದೆ!
ಕಾಯದಲ್ಲಿ ಕದನದಿಚ್ಛೆ
ಅಧರದನು ಕೊಂಚ ಮುಚ್ಚೆ
ಅರಳುತಿರುವ ಮರುಳು ನಗೆ

ಸಾವಿರ ಸಿಗರೇಟ ಹೊಗೆ;
ಮಧುವಿನಲ್ಲಿ ಮಿಂದ ಮುದವು
ಮನಸ ಕೆದರಿದೆ!

ಹಾಡಿನೊಂದು ತೆರೆಯ ಮೇಲೆ
ನರ್ತನಗಳ ತೆಪ್ಪ ತೇಲೆ
ಧೀವರಿಯರು ಬಲೆಯ ಬೀಸಿ
ಮತ್ಸ್ಯಕಾಗಿ ಕಾಯ್ದರೆ,
ವಿಲಾಂಗಳಿವೂ ಗುಣಿಸಿ ಗುಣಿಸಿ
ಅವಳನೆಣಿಸಿ ಇವಳ ಕುಣಿಸಿ
ಮುಗುಳು ನಗುತ ಮೆಲ್ಲನೀಸಿ
ಬಲೆಯು ಹಾಯ್ದರೆ!

ಜೀವನಕ್ಕೆ ಎರಡು ಮುಖ—
ಒಂದು ಸುಖ ಒಂದು ದುಃಖ;
ನಾಳಿನರಿವು ಯಾಕೆ ಸಖಾ?
ಇಂದಿಗಿಹುದು ತುಂಬ ಸುಖ!
ನೋಡು ಗಾನವೇರುತಿಹುದು!
ದೀಪವೆಲ್ಲ ಆರುತಿಹುದು!
ಕುರುಡು ನೀಲ ಬೆಳಕಿನಲ್ಲಿ
ಕೊಳ್ಳೊ ಅವಳ ಬಾಹುಗಳಲಿ.
ಒಟ್ಟಿನಲ್ಲಿ ಗುಟ್ಟನಾಡೆ
ಮೊಗವನಿರಿಸೆ ಹೆಗಲ ಕೊಡು.
ಬಳ್ಳಿಗೊಂದು ಬಲವನೀಡೆ
ಕಟಿಗೆ ಕೈಯ್ಯ ಇಂಬನಿಡು.
ತಾಳದೊಡನೆ ಮೇಳವಿಸುವ
ಎರಡು ಮಧುರ ನುಡಿಯಲಿ
ಜೀವನಗಳ ಜೀವರಸವ
ಅಧರಕಧರ ಕುಡಿಯಲಿ!

ಮುತ್ತಿರುವರೆ ಕತ್ತಲು
ಸೌರಭವಿದೆ ಎತ್ತಲು
ಸುಂದರಿಯರು ಸುತ್ತಲು!

ಒಂದು ರಾತ್ರಿ ಒಮ್ಮೆ ಸೊಕ್ಕಿ
ಶಾಸ್ತ್ರಗಳನ ದೂಡ್ಯೇನ!
ಇಂದು ರಾತ್ರಿ ಬಂದ ಹಾಗೆ
ನನ್ನ ಬಾಳ ಮಾಡ್ಯೇನ!
ಪೃಥಿವಿಯುದರ ಮಡಿಲನೊಕ್ಕಿ
ಸಾರವನ್ನ ನೋಡ್ಯೇನ!
ಮಿಂಚಿನೊಡನೆ ಮಿಂಚುತೊಮ್ಮೆ
ಕತ್ತಲೆಯನ ಕೂಡ್ಯೇನ!

---

## ಜಿ. ವಾಮನ ಭಟ್ಟ

### ೧ ಬಯಲಿನ ಸೊಬಗು

ನಮ್ಮೂರ ಪರ್ವತದ ಕಾಲ್ಬುಡದ ಬಯಲು
ತರತರದ ಹೂವಿಂದ, ವಿಧವಿಧದ ಹುಲ್ಲಿಂದ
ಶೋಭಿಸುತ, ಹೊಳೆದಡದ ಮೇಲ್ವಾಸಕಿಳಿದು
ಬಂದಿಹುದು ಮುಗಿಲಿನ ನೆರಳಿನಲಿ ನಡೆದು.

ವೃಕ್ಷಗಳ ಕೊಂಬೆಗಳು, ಬಳಿಬಳಿಗೆ ಸೇರ್ದು
ತಳಿರಿಂದ ತಳಿರಿಂಗೆ ನೆರಳನ್ನು ಬಿಗಿದು,
ವಿನಯದಲಿ ತೂಗುತಿಹ ರೆಂಬೆಗಳಲಿಳಿಸಿ
ಕೊಡುತಿಹವು ಹೂದಳಿರ ಗಂಧವನು ಹರಸಿ.

ವೃಕ್ಷಗಳ ರೆಂಬೆಗಳು ಮುಂದಕ್ಕೆ ನೆಗೆದು
ನೆರಳಿತ್ತ ತಾಣದಲಿ ಹರಿಯುವುದು ಹೊಳೆಯು
ತೀರದಲಿ ಮೆರೆಯುವುದು ಮೇಲ್ವಾಸ ಬಯಲು
ನಮ್ಮೂರ ಪರ್ವತದ ಕಾಲ್ಬುಡದ ಧನವು.

ಮಳೆಯಲ್ಲಿ ಮೈದುಂಬಿ ಮೆರೆಯುತಿಹ ಹೊಳೆಗೆ
ನೆರೆಯೊಂದು ನೊರೆಯೊಂದು ನೆಗೆಯುತಿಹ ನಡೆಗೆ
ಝರಿಯೊಂದು ತೊರೆಯೊಂದು ಹರಿಯುತಿಹ ನದಿಗೆ
ಈ ಬಯಲು ಕೆಳಗಿಳಿದು ಕೂಡುವುದು ಕಡೆಗೆ.

ಬಯಲಿನಲಿ ಹುಲುಸಾಗಿ ಬೆಳೆದಿರುವ ಹುಲ್ಲು
ನೆಳಲಂತೆ ಸುಳಿಸುಳಿವ ಜನಕೆಲ್ಲ ಹಾಸು;
ಬಯಲಿನಲಿ ನೆಗೆದಿರುವ ತರತರದ ಹೂವು
ಮುಗಿಲಂತೆ ತಡೆತಡೆವ ರಸಿಕರ್ಗೆ ಚೆನ್ನು.

ಬಹುದೂರದಿಂದಾಗಿ ನಡೆನಡೆದು ಬಂದು
ವಿಶ್ರಾಂತಿಗಾಗಿಲ್ಲಿ ಈ ಹೊಳೆಯು ಸೇರ್ದು
ನನುನ್ಮೂರ ಪರ್ವತದ ಕಾಲ್ಬುಡವ ತೊಳೆದು
ಸುಳಿಸುಳಿದು ಬಳೆಬಳೆದು ಹರಿಯುವುದು ಸುತ್ತು.

ಈ ತೊರೆಯು ದಾಟುತ್ತ ಅವರಾಚೆ ಪಡೆದು
ಹಗಲೆಲ್ಲ ಮೇಯುವುವು ಹಸುಮೇಕೆ ತಡೆದು;
ಆಗಲ್ಲಿ ಬಳಿ ನಿಂತ ತಾವರೆಯ ಬಳ್ಳಿ
ಗೋವಳನ ನಲಿಸುವುದು ಬರಿ ಮುಂಕು ಹಚ್ಚಿ.

ತಾವರೆಗೆ ತಳವೆಟಕಿ ಬಾರದಿಹ ತಾಣಂ
ಅಲ್ಲೊಂದು ಇರುತಿಹುದು ಗಾಂಭೀರ್ಯದಾಣ್ಮಂ
ಸುತ್ತಲ್ಲಿ ಶುಕಪಿಕದ ಗಂಭೀರ ಗಾನಂ
ಕೇಳುವುದು ನೀರವದ ಸಂತೋಷಸಾರಂ.

ದಣಿವಾಂತ ಮರಿಹುಲ್ಲೆ — ಬಳಕುತಿಹ ದೇಹ
ಹೆದರಿರುವ ಮೃಗಜಾತಿ, ಚಂಚಲದ ನೇತ್ರ—
ಮೋರೆಯನು ನೀರೊಳಗೆ ಇಳಿಬಿಟ್ಟು ಮೆಲ್ಲ,
ಬಾಯ್ತಣಿಸಿಕೊಳ್ಳುವುದು ಬಂದು ಹಗಲೆಲ್ಲ.

ದೂರದಲಿ ಬೆಟ್ಟಗಳ ಬಿತ್ತರದ ಛಾಯೆ
ಕೆಳಸಿಂತ ಗುಡ್ಡಗಳ ಮೇಲಕ್ಕೆ ಹರಿಯೆ
ತೋರದಿಹ ಮೇಘಗಳ ಶಾಶ್ವತದ ನೆರಳೆ
ಎಂದೆಂಬ ಭ್ರಾಂತಿಯನು ಕಟ್ಟುವುದು ಮನಕೆ.

ದೂರದಲಿ ತೋರುವುದು ಬೆಟ್ಟಗಳ ಸಾಲು
ಆಗಸಕೆ ಬಣ್ಣದಲಿ ಸರಿಸಾಟಿ ನಿಂತು
ದಪ್ಪನಿಹ ರೇಖೆಯಲಿ ಭಿನ್ನತೆಯ ಪಡೆದು
ಶಾಶ್ವತದ ಮುಗಿಲಂತೆ ನಿಂತಿಹುದು ನೆಗೆದು.

ಆ ಬಯಲ ನಡುವಿಂದ ಗುಡ್ಡಗಳ ಮೋರೆ,
ಮತ್ತಿದರ ಬದಿಯಿಂದ ಕಿರಿಹೊಳೆಯ ಶೋಭೆ,
ಇವುಗಳನು ಕಾಂಬವರ ತೋಷಗಳ ಸೋಗೆ
ಮೂಡಿಹುದು ಕವಿಹೃದಯ ಜಗದಾತ್ಮದಲ್ಲಿ.

## ೨ ಈ ದಾರಿ

ಈ ದಾರಿ, ತುಂಬುವೊಳೆ ದಂಡೆಯಲಿ ಹೊಳೆದು
ಬಿತ್ತರದ ಪುಲಿನದಲಿ ಸಾಗುತಿದೆ ಬೆಳೆದು;
ನದಿತೀರ ತೇವದಲಿ ಮಳಲೆಲ್ಲ ನನೆದು
ಮೇಲೆದ್ದು, ಹೆಗಲಿತ್ತು, ನಿಂತಂತೆ ಇಹುದು.

ಈ ದಾರಿ ಹೊಸದಿಲ್ಲ—ಇದು ಕುಸಿಯಲಿಲ್ಲ.
ಮೆಲ್ಮಳಲು ಹಾಸಿಹುದು ಬಹಳುದ್ದದಲ್ಲಿ;
ರಕ್ಷಕರ ಬೆಳಕಿದ್ದು ಸುಲಿಗೆಯವರಿಲ್ಲ;
ಎಲ್ಲಲ್ಲಿ ನೋಡಿದರು ತೋರುವುದು ಹೊಸತು.

ಹಳೆಹಾದಿ ಚರಿತೆಗಳು ಕಾಲದಲೆಯಲ್ಲಿ
ಸೆರೆಸೇರುತಿಳಿದಿಹವು ನದಿನೀರಿನಲ್ಲಿ
ಹಳೆದಾರಿ ಕಟ್ಟಡದ ಪಂಚಾಂಗವೆಲ್ಲ
ಹೂತಿಹುದು ಹಾದಿಯಡಿ ನೆಲದಗಲದಲ್ಲಿ.

ಅಡಗಿಹರು ವೈಭವದ ನೃಪರೆಲ್ಲರಲ್ಲಿ
ಸಾವಿನಲಿ ಮೊಗವೆತ್ತಿ ಕಾಣಲದು ನಾಚಿ.
ನೀನೇಕೆ ಮೆಲ್ಲಡಿಯ ನಡೆಯನ್ನು ನಡೆವೆ
ಈ ನೃಪರ ಹಂಗೇನು ನಿನಗಿನ್ನು ಮರುಳೆ?

ಪೂರ್ವದಲಿ ಜನತೆಯಾ ಬೆನ್ನುಗಳ ಮೇಲೆ
ಸೈನಿಕರ ಪಡೆಯನ್ನು ನಡೆಸಿಹರು ಇವರು.
ತಿನಿಸಿತ್ತು ರಕ್ಷಿಸುವ ನೆವದಿಂದ ನಿನ್ನ
ಬಾಯಿಂದ ತಿನಿಸನ್ನು ಹೊರಗೆಳೆದು ಬಿಟ್ಟು.

ಅಧಿಕಾರ ದರ್ಪಗಳ ಗೋರಿಗಳು ಕೆಳಗೆ;
ಸ್ವಾತಂತ್ರ್ಯಸಮತೆಗಳ ತಿಳಿಬಾನು ಮೇಲೆ.
ಗೋರಿಗಳ ತುಳಿಯುತ್ತ ಸಮತೆಯಲಿ ಮೆರೆದು
ನೀ ನಿನ್ನ ಪಯಣವನು ಬೆಳೆಸುತಿರು ನಲಿದು,

ಹಾಡುಗಳ ಹಾಡುತಲಿ ಸಾಗುವನು ಕವಿಯು
ಹಾಳಾದ ಆಳಿಂದು ಆಳುವನು ಕಲಿತು.
ಹಕ್ಕಿಗಳು ಚಿಲಿಪಿಲಿಯ ಗೀತವನು ಪಾಡಿ
ಪ್ರೇಮದೊಂದಿರವನ್ನು ಬಿಗಿಯುವವು ಕೂಡಿ.

ಈ ದಾರಿ ಹೊಸದಿಲ್ಲ—ಹಳೆಜನರ ಕಾಣೆ.
ಹೊಸ ಜನರು ನಡೆಯುವರು ಹೊಸ ಭಾವದಲ್ಲಿ.
ಕರ್ತವ್ಯದಕ್ಷತೆಯ ಹಳೆ ಜನರ ಎಲುಬು
ಹೊಸದಾರಿಗಿತ್ತಿಹುದು ನೂರಾರು ಮಳಲು.

ಮೃತ್ಯುವಿನ ತೀರದಲಿ ಜೀವನದ ಹಾದಿ
ಸಾಗುತಿದೆ ಸಪ್ರೇಮಕ್ರಮವನ್ನು ಹಿಡಿದು.
ಅಂದಂದು ಮೃತ್ಯುವಿನ ವೀಚಿಗಳು ಬಂದು
ಅಳಿಸುವವು ನರನಾರಿ ದರ್ಪಗಳ ರೂಪು.

## ೩. ಭಿಕ್ಷಾಪಾತ್ರೆ

ಪಾವನ ಗಂಗೆಯ ಬಿತ್ತರ ಬಯಲಲಿ
ಊರಿಂದೂರಿಗೆ ಪಯಣವು ಬೆಳೆಯೆ,
ನಾಡಿನ ರಾಜಗೆ, ಕಾಡಿನ ಕಳ್ಳಗೆ
ಬೆದರದೆ "ಭಿಕ್ಷಾಂ ದೇಹಿ"ಯನೊರೆದೆ.

ಊರಿನ ನೀರವ ಮಹಲಿನ ಅಡಿಯಲಿ
ಹಳ್ಳಿಯ ಬಡವರ ಗುಡಿಸಲ ಬಳಿಯಲಿ
ಸಿಂಗರ ತೋಟದ ಲತೆಗಳ ಬದಿಯಲಿ
ಭೀಕರದಡವಿಯ ಮರಗಳ ನೆಳಲಲಿ
ಕರಗಳ ತೂಗುಂಬೊಟ್ಟಿಲ್ಲ ನೆಲ್ಲದಲಿ
ನಲಿಯುತ ಹೆಸರನು ನೀ ಪಡೆದೆ.

ಗೌತಮನು ಯಾಚಿಸುತ ಮುಂದೆಸೆದ ಪಾತ್ರವಿದು
ಗೌತಮನ ಭಿಕ್ಷೆಯನು ಹೊತ್ತಿರುವ ಪಾತ್ರೆ.
ಹಿಂಜರಿವ ಕೊಡುಗೈಗೆ ಬ್ರಹ್ಮಾಂಡವಿವರವಿದು
ತುಂಬುವುದು ಬಡತನದ ನಾಲ್ಕೈದು ಹಣದೆ.

ತೂಗುವ ಭರದಲಿ ಜಗವನು ಮರೆತು
ಮರವೆಯು ಗಬ್ಬದಿ ಜಗವನು ಹೊತ್ತು
ಧರಣಿಯು ಸೊಗದಲಿ ಆಸೆಯ ನೀಗಿ
ಮನುಜನ ಮೋಕ್ಷದೆ ಮನಸನು ಮಾಡಿ
ನಡೆದನು ಬುದ್ಧನು ಮುನಿಯಾಗಿ.

ಈ ಪಾತ್ರೆ ಬಸಿರಿಂದ ಹಸಿ ಹಸುರು ಹುಲ್ಲು
ಗೌತಮನು ಬಳಿಬಂದ ಮರಿಹುಲ್ಲೆಗುಣಿಸೆ,
ತೆಗೆತೆಗೆದು ತಿರಿತಿರಿಗಿ ಕರೆಯುತ್ತ ತಿನಿಸಿ
ಅದರೊಡನೆ ಬೇಡಿದನು ನಲ್ಮೆಗಳ ಭಿಕ್ಷೆ.

ತ್ಯಜಿಸುತ್ತ ಸಿರಿತನವ, ಬಡತನವನಾಂತು
ವೇದವೇದಾಂತಗಳ ಮರ್ಮವನು ತಿಳಿದು
ಹೊಸಮನವ ಭಾರತದ ಭುವಿಯಲ್ಲಿ ನೆಟ್ಟು,
ಧರ್ಮಗಳ ಪೆಸರಿನಲಿ ದೈವಗಳಿಗಾಗಿ
ಹರಿಯುತಿಹ ರುಧಿರಗಳ ಹೊನಲನ್ನು ತಡೆದು,
ಕರುಣೆಯನು ಒಸರುತಿಹ ಒರತೆಯನು ಮಾಡಿ
ಹರಿಯದಿಹ ಕಾಲನಿಗೆ ಚೋದನೆಯ ಕೊಟ್ಟು,
ರಕ್ಷಿಸಿದ ಗೌತಮನ ಒಡನಾಡಿಯಾದೆ.

ಕಳೆಯಿತು ಕಾಲವು; ಬೆಳೆಯಿತು ಸೃಷ್ಟಿಯು—
ಸಿಡಿಯಿತು ಲೋಕದ ನೆಲೆಗಟ್ಟು.
ಕಳೆಯುದ ಕಾಲಕೆ ಬೆಳೆಯುದ ಸೃಷ್ಟಿಗೆ
ಕರುಣೆಯೆ ನಿಲ್ಲಲಿ ನೆಲೆಗಟ್ಟು.

ಶಾಂತಿಯ ಕಂಗಳ ಮೆಲ್ಲನೆ ಮುಚ್ಚಿ
ಮುಚ್ಚಿದ ಕಣ್ಣನು ಬಳಿಕದೆ ತೆರೆದು
ಅಭಯದ ಕೈಯನು ಮೇಲಕೆ ಸೆಳೆದು
ಗಾಳಿಯ ಬಲೆಯನು ಮೆಲ್ಲನೆ ಹೆಣೆದು
ಬೆಣ್ಣೆಯ ಕಾಲನು ಮುಂದಕೆ ನೀಡಿ
ನಡೆಯುವ ಮುಂಚೆಯೆ ನೆಲವನು ಅಳೆದು
ಕಂಗಳ ಸೆರೆಯಲಿ ಮಲಗಿದ ಶಾಂತಿ
ಕೈಗಳ ಬಲೆಯಲಿ ಸಿಲುಕಿದ ಶಕ್ತಿ
ಕಾಲ್ಗಳ ನಡೆಯಲಿ ತೋರುವ ನವತೆ
ಇವುಗಳ ಜನತೆಗೆ ತೋರಿಸಿ ಮುಂದೆ
ನಡೆಯುವ ಬುದ್ಧನ ಸಹಚರನಾದೆ.

## ೪ ನಡೆವ ನೆರಳು

ನಾಡಿನ ನಾಡಿನ ನರಗಳ ತಿರುವಿ,
ಬಿಸಿ ಬಿಸಿ ನೆತ್ತರ ಕೋಡಿಯ ಸುರಿಸಿ
ತಾನೂ ಕುಡಿಯದೆ ನೀರವಳಾಗಿ
ಮರಳಿನ ಕಾಡನು ನಡೆನಡೆದೆಲ್ಲಿ
ಹೋಗುವೆ ಹೋಗುವೆ, ನೀನೆಲ್ಲಿ?

ಮರಳಿನ ಕಾಡೊಳು ಹರಿವುದು ಸರವು
ನಿನ್ನಯ ಹಿಂದಕೆ ನೆತ್ತರ ಸರವು.
ಮುಂದಕೆ ಮುಂದಕೆ ನೋಡುವಿಯೇನು?
ಹಿಂದಕೆ ಹಿಂದಕೆ ನೋಡಿದಿಯೇನು?
ನಡೆಯುವ ನೆರಳೇ ನೀ ನಿಲ್ಲು.

ನಡೆಯುವ ನೆರಳೇ ನೀ ನಡೆದಾಯ್ತೆ?
ಮರಳಿನ ಗಡಿಯನು ನೀ ಪಡೆದಾಯ್ತೆ?
ಮರಳಿನ ಕಾಡೊಳು ನೆಲ ತಂಪಾಯ್ತೆ?
ನೆತ್ತರ ಕೆರೆಯಲಿ ಕಮಲಗಳಾಯ್ತೆ?
ನಡೆಯುವ ನೆರಳೇ ನಿಂತಿಹೆಯ?

ಕಮಲದ ನೆರಳಲಿ ಕಣ್ಣಸು ಮುಚ್ಚಿ
ಅಂಚೆಯು ಮೆರೆವುದು ಬಗೆಯನು ಬಿಚ್ಚಿ.
ನಡೆಯುವ ನೆರಳಿನ ಮುಗಿಯದ ನಡೆಯು
ಮುಗಿಯುತ ಬಂದಿತು. ಈ ನಡೆಯಾಯ್ತು.
ನಡೆಯದ ಮನುಜಗೆ ಬಿಡುವಾಯ್ತು.

## ೨೧ ಈ ನನ್ನ ಲತೆ

ಜನರುಲಿವ ಮಾತಿಲ್ಲ; ಜನರಿಡುವ ಅಡಿಯಿಲ್ಲ;
ಧನಕನಕ ಪಸರಿಸುವ ಮೋಹಗಳ ಜಾಲವಿಲ್ಲಿಲ್ಲ.
ಮನವೊಂದು ನಿರ್ದಿಷ್ಟ ಗಮನದಲಿ ಬಂದಿಲ್ಲಿ
ಇನಿತಿನಿತು ಸಂಚರಿಸಿ ಮರಳುವುದು ದಿನಕೊಂದು ಬಾರಿ.

ಬಿತ್ತರದ ತಾಣವಿದು— ಬೆಳೆಯುತಿಹ ಮರಗಿಡವು,
ಸುತ್ತುತಿಹ ಬಳ್ಳಿಗಳು, ಹರಡುತಿಹ ಹುಲ್ಲುಪೊದರುಗಳು
ತಂತಮ್ಮ ಹೂದಳಿರು ಹೀಚುಗಳ ಬಳಗವನು
ಕತ್ತರಿಯ ನೇಹದಲಿ ಮೋಹಿಸುತ ಬಾಳಿ ಬದುಕಿಹವು.

ಈ ಲತೆಯು ನವಕುಸುಮ ಕೋಮಲದ ಮೈಯಿಂದ
ನಲ್ಲನನು ಬಿಗಿದಪ್ಪಿ, ಮೈಗೊಂಡು ಬಂದ ಯೌವನಕೆ
ದಾಳಿಯಲಿ ಬಂದಿದ್ದ ನುಣ್ಬಟಿಯು ಪುಷ್ಪದಲಿ
ಬಾಳುವೆಯ ನಲ್ಮೆಯನು ಲೀಲೆಯಿಂದಲಿ ತೋರುತಿಹಳು.

ಮೈಗೊಂಡ ಯೌವನದ ಬಾಳ್ಗವಿಯು ಒಡಲಲ್ಲಿ
ತೂಗುತಿಹ ಸವಿಗನಸ ರಾಜ್ಯದೊಳಗೋಲಾಡಿಕೊಂಡು
ಹಿಗ್ಗುತಿಹ ಮನದಿಂದ, ಮುಗ್ಗುತಿಹ ಕಾಲಿಂದ,
ನೆನೆಯುತಿಹ ಕವಲಿಂದ ಕುಣಿಕುಣಿದು ಬಳಿಕ ಸುಖಿಸುವಳು.

ಶೈಶವವು ಜವ್ವನಕೆ ಮಾರ್ಪಟ್ಟು ಬಂದಿದ್ದು,
ಬೀಸುತಿಹ ಪರಿಮಳದ ತಂಗಾಳಿಗೊಡಲನ್ನು ಬಿಟ್ಟು
ಸಂಸಾರ ಮರೆತೊಮ್ಮೆ, ಮಬ್ಬಿನಲಿ ತೂಗುತಿಹ
ಸಾಸಿರದ ಚುಕ್ಕಿಗಳ ಕಂಡೊಮ್ಮೆ ನಾಚಿ ಬಳಕುವಳು.

ಜೀವನದ ಸೊಗಸಿನಲಿ ದುಗುಡವನು ಕಂಡಿರದ
ತಾವರೆಯ ಹೃದಯದಲಿ ರಸವೀಂಟಿ ಬಂದಿರುವ ತುಂಬಿ
ಪಾವನದ ಝೇಂಕಾರ ಮಾಡುತ್ತ ಬಂದಿಲ್ಲಿ
ಕೈವಲ್ಯ ಪ್ರೇಮವನು ಸೂಸುವುದು ಹೂಗಳನು ಮುತ್ತಿ.

ತುಂಬಿಗಳ ಝೇಂಕಾರ ಗಾಯನದ ಉಸಿರಿನಲಿ
ಕಂಬನಿಯ ಬಿಂದುವನು ಕೆಳಸುರಿಸಿ ತೊನೆದಾಡಿಕೊಂಡು
ನಂಬಿಗೆಯ ಗೆಳೆಯರ್ಗೆ ನಚ್ಚಿನಾ ರಸಿಕರ್ಗೆ
ಸಂಭ್ರಮದಿ ಸ್ವಾಗತವನಿತ್ತು ನೆನೆಯುವಳು ನೆನೆಯುವಳು.

ಝೇಂಕರಿಪ ತುಂಬಿಗಳ ಗಾಯನಕೆ ತಾನದಲಿ
ಆ ಕೈಯನತ್ತಕ್ಕೆ ಈ ಕೈಯನಿತ್ತಕ್ಕೆ ನೆಗೆದು
ಆಕಾರದಲಿ ಬಳುಕಿ, ಲಾಸ್ಯದಲಿ ಕುಣಿಕುಣಿದು
ಸಿಕ್ಕಿನಲಿ ನೆನೆದಂತೆ ನಿಂತೆದ್ದು ಮನದೆ ನಾಚುವಳು.

ತುಂಬಿಗಳ ಗಾಯನಕೆ ಮನಸೋತ ಈ ಬಳ್ಳಿ
ಕಂಬನಿಯ ರಸದಿಂದ ನಯವಾಂತ ಪಲ್ಲವಾಧರದಿ
ಸಂಭ್ರಮದೆ ವೈಭವದ ಮುಗುಳನ್ನು ಪುಲ್ಲಿಸುತ
ಶಂಭುವಿನ ಪಾವನದ ಚರಣಗಳ ವಂದಿಸುವಳು ಬಾಗಿ.

ಮಾಗಿಯಲಿ ಬಡವಾಂತು ಸುಗ್ಗಿಯಲಿ ಮೈಯಾಂತು
ಹಾಗಿರದ ಹೀಗಿರದ ಸೌಭಾಗ್ಯ ಮಾಂಗಲ್ಯವಾಂತು
ಮೊಗ್ಗೆಯಲಿ ಹುದುಗಿಟ್ಟ ಸಿಂಗರದ ಚೆಲುವಾಂತು
ಭಾಗ್ಯದಲಿ ಬಾಳುತಿಹಳೀ ಲತೆಯು ಮುಗುದತನವಾಂತು.

ಜನರುಲಿವ ಮಾತಿಲ್ಲ; ಜನರಿಡುವ ಅಡಿಯಿಲ್ಲ;
ಧನಕನಕ ಪಸರಿಸುವ ಮೋಹಗಳ ಜಾಲವಿಲ್ಲಿಲ್ಲ.
ಮನವೊಂದು ನಿರ್ದುಷ್ಟ ಗಮನದಲಿ ಬಂದಿಲ್ಲಿ
ಇನಿತಿನಿತು ಸಂಚರಿಸಿ ಮರಳುವುದು ದಿನಕೊಂದು ಬಾರಿ.

## ಟಿ. ನಾರಾಯಣ ಭಟ್ಟ

### ೧ ಉದಯ

ಉದಯಸೃಷ್ಟಿಯ ಮೊದಲ ಜಗದ ಪರಿಚಯವೆಲ್ಲ
ನಿಶೆಯ ನಿಬಿಡಾಂಧಕಾರದ ಕಣ್ಣೊಳಡಗಿತ್ತು;
ಎಂದಿನಾ ಕಾಲದಲಿ ಜಡತೆ ಹರಿದೊಗೆದತ್ತ
ಸುಪ್ರಭಾತವ ಬೀರಿ ನವಚೇತನವ ತೋರಿ
ಉದಯವನುವಾಪುದೋ, ಅಂದಿನಿಂದೀ ಲೋಕ
ರೂಪ ಬೆಳಗಿತು, ಬಾಳಸರಸತೆಯ ತಿಳಿವಾಯ್ತು.
ಕೆಂಬಣ್ಣ ಹೊಂಬಣ್ಣ ಬೆರಸಿ ಮೂಡಣ ಬಾನ
ತಡಿಕೆಯಲಿ ಚೆಲುವಾಗಿ ಹಸರಿಸಿದ ರವಿಬಿಂಬ,
ಹಚ್ಚನೆಯ ನಿರಿಯುಡಿಗೆ ನದಿನದಂಗಳ ಕಾಂಚಿ,
ಗಿರಿಪಂಕ್ತಿಗಳ ಕೊಡಿಗೆಗಳ ತೊಟ್ಟ ಭೂರಮೆಯ
ಚೆಲುವು ಸೊಬಗಿನ ನಿಲುವಿನಾನಂದಮಯಚಿತ್ರ,
ಉದಯರಾಗದ ಸೊಗಸಿನಿಂಪು, ಹದುಳದ ಹೃದಯ
ಮುದಿತಪಕ್ಷಿಗಳುಲಿಪು, ಕುಸುಮಗಂಧಿತ ವಾತ,
ನಿತ್ಯ ಸಿದ್ಧವಿವಾಗಿ ರಸ್ಯವೆನಿಪ್ಪವು ಸತತ.

### ೨ ಆಶಯ

ತಾಯಿನುಡಿಸೇವೆಯಲಿ ಕಳೆಯಲೆನ್ನಯ ಕಾಲ,
ತಾಯಿನಾಡಿನ ಶ್ರೇಯಕಿರಲೆನ್ನ ಧ್ಯೇಯ.
ನಾಡಿನುನ್ನತಿಯನಾ ನಾಡನುಡಿಯೇಳ್ಗೆಯಿಂ
ನೋಡಲಾಪ್ಪುದರಿಂದಲೆನ್ನ ತಾಯಿ-
ನಾಡನುಡಿಯುನ್ನತಿಯ ಬಯಕೆಯಿಂದೆನ್ನ ತನು-
ಮನಧನಗಳೇಗಳುಂ ಸವೆಯುತಿರಲಿ.

ಜನದೆಸಕಜಾಲದಿಂ ದೂರವಿರಲೆನ್ನ ಮನ
ಮುಸುಕದಿರಲೆನ್ನ ಬಗೆ ಸ್ವಾರ್ಥತಮದಿಂ;
ಕುಸುಮವಾಸನೆವಿಸರದಂತೆನ್ನ ಜೀವನದ
ಪ್ರತಿಕೃತಿಗಳೆಸೆದಿರಲಿ ದೆಸೆದೆಸೆಯಲಿ.

ಸುಜಲದಿಂ ತವಿಪ ಸುಫಲಂಗಳಿಂ ಪೋಷಿಸುವ
ಸಸ್ಯಶ್ಯಾಮಲೆ ಪ್ರೀತೆ ಭೂಮಾತೆಯ
ನಿಜಪಾದಕಮಲದರ್ಚನೆ ಸದಾ ಸುಮನದಿಂ
ದೊಗೆದ ಹೃತ್ಕುಸುಮದಿಂ ಸಡೆಯುತಿರಲಿ.

ಜಯತು ಕರ್ನಾಟಕಂ ಜಯತು ಭಾರತ ಭೂಮಿ
ಜಯತು ಸಾರಸ್ವತೋದ್ಯೋಗದೆಸಕಂ;
ಜಯತು ಮಾತೆಯ ಬಂಧಮುಕ್ತಿಯೋಧರ ಚಾಗ
ಜಯ ಸದಾ ಜಯತು ಜಯ ಕರ್ನಾಟಕಂ.

## ೩ ಆ ದಿನ

ಕನಸಿನ ಚಿತ್ರವು ಕರಗುವುದರಿದೇ?
ಮನದಲಿ ನೆಲಸಿದ ರೂಪುಳಿಯುವುದೇ?
ದಿಟ್ಟಿಯ ನೋಟವು ಕಾಣುತಿರುವುದೇ?
ಎಷ್ಟೆಂದರು ಆ ದಿನವ ಮರೆವೆನೇ!

ಕನಸೋ ನೆನಸೋ ದಿಟ್ಟಿಯ ನೋಟವೊ
ಒಂದೊಂದಾಗಿಯೊ ಒಟ್ಟಾಗಿಯೊ ಸೊಗ-
ವರಿತನುಭವಿಸಿದ ತಿಳಿನಲವಿನ ಸವಿ-
ದಿನಕಾ ಮನಕಾ ಸೊಗಕೇ ಮರವೇ?

ತಿಂಗಳ ಹಸರಿಪ ಜೊನ್ನದ ಶೀತಲ-
ವನ್ನೆನಗಿತ್ತುದು ಆ ಮೊಗಚಂದಿರ;
ಸಂಜೆಯ ಕೆಂಪಿನ ಬಗೆಮರೆಸುವ ಮನ-
ವನು ನೆನೆಯಿಸಿ ತಾ ಚೆಲುವೊಗಸೆಂದುರ.

ಕಿರುವರಳಿದ ನಗೆ, ಮಲ್ಲಿಗೆ ಮುಗುಳಿನ
ಸೊಗ ಬಗೆಗೊಳಿಸಿತು; ಮಿನುಗುವ ತಾರೆಯ
ಕಳಕಳಿಸುವ ಕಳೆ ಕಣ್ಣೋಟದ ನಲಿ-
ವಿನ ಸುಳಿ ಬಲಿಸಿತು, ನಲವನು ಕಲಿಸಿತು.

ವಾದ್ಯದ ಸವಿದನಿಯಾಲಿಸಿತೇ ಕಿವಿ?
ವೇದೋಚ್ಚರಣೆಯು ಮನಕನಿಸಿತೆ? ತನು
ಕೋಡಿತೆ ಗಂಧದ ತಣ್ಪಿಂದೇವೆನು?
ಮೈಮರೆತವನೇನರಿಯುವುದುಂಟೇ?

ಏಸುದಿನಾದರು ಆ ದಿನಕೆಣೆಯೇ?
ಮಾಸುವುದೆಂತಂದೊದವಿದ ಸುಮನ ವಿ-
ಕಾಸವದಿನ್ನೆನ್ನೊಳಗೆಡೆಗೊಡುತ ವಿ-
ಲಾಸದಿ ನಳನಳಿಸುವುದೇನರಿದೇ?

ಅಳಿಕುಲ ತನಿಜೇನ್ ದೊರಕಿಸಿಕೊಳಲೆಂ-
ದೊಲವಿನ ಮಾಟದಿ ನಸುದೆರೆದಿಹ ಸುಮ-
ಕೆರಗಲದಿನಿತೊಂದೊಲವನು ನಲವನು
ಗೆಲವನು ಪಡೆಯುತ ನಲಿನಲಿದಲೆವುದೆ?

ಧ್ಯಾನಿಯ ಧ್ಯಾನದ ಬಿಗುವನು ಮೀರುತೆ
ಮೌನಿಯ ಮೌನದ ಮೇರೆಯ ಸಾರುತೆ
ಪ್ರೇಮಿಯ ಹೃತ್ತಂತ್ರಿಯ ಮಿಡಿದಾಡುತೆ
ಆದಿನವರಿತೆನು ಜೀವನ ಸಾರತೆ.

## ೪ ವಿಶ್ವಮಂದಿರ

ದಿನದಿನದ ಮುಂಜಾನೆ ಸಂಜೆ ಹೊತ್ತನು ಕಾದು
ಪೊಡವಿಯಾಗಸವೆಂಬ ತಟ್ಟಿತಡಿಕೆಯ ಹಿಡಿದು
ಕೆಂಬಣ್ಣ ಹೊಂಬಣ್ಣ ಬೆರಸಿಯುದಯಾಸ್ತಮಯ
ಚಿತ್ರ ಬರೆಬರೆದಿನಿತು ದಣಿವರಿಯದಿರುತಿಹನು.
ಅಂದಿದ್ದ ಭೂಜಲವೆ ಸೂರ್ಯಚಂದ್ರರು ಅವರೆ
ಅಂದಿನಂತಿಂದು ಋತುನಿಯಮ ಬನಸಿರಿಬೆಡಗು.

ಹುಟ್ಟುಸಾವುಗಳಂತೆ ಮೆಚ್ಚುಮುನಿಸುಗಳಂತೆ
ಚುಕ್ಕಿ ಬಾಂದಳ ಮಿನುಗು ಕಳೆಯದುವೆ ಬೆಳಗಿಹುದು.
ಎತ್ತಲೂ ಪರಿದಿರುವ ವಿಸ್ತಾರವಲಯದಲಿ
ನೋಟಕೊದಗುವ ಸೊಗಸು ಮನದ ಸಂತಸದೊಸಗೆ
ಚ್ಯುತಿವಡೆಯದಂತರಿಸದನವರತವೆಸೆದಿಹುದು,
ಕತ್ತಲೆಯ ಮುಸುಕ ಸೆಳೆದೆಳಗದಿರ ಕುಂಚದಲಿ
ನಿತ್ಯನವತೆಯ ಬೆರಸಿ ಸೃಷ್ಟಿಶೋಭೆಯ ತೋರಿ
ವಿಶ್ವಮಂದಿರ ದಿವ್ಯಭವ್ಯತೆಯ ನೆಲೆವೀಡು.

## ೫ ಚುಕ್ಕಿ ಮಿನುಗುತಿದೆ

ಏನಿದು ಗುಟ್ಟು! ಮಿರುಗಿನ ಕದತೆರೆದೊಮ್ಮೊಮ್ಮೆ ;
ತನುವಿನ ಪ್ರಭೆ ತೋರಿಸುತೊಮ್ಮೊಮ್ಮೆ
ಮುಚ್ಚುತ ತೆರೆಯುತ
ತೆರೆಯುತ ಮುಚ್ಚುತ
ನೃತ್ಯವಮಾಡುತ ಬೆಡಗನು ಬೀರುತ
ನಿತ್ಯಾಕಾಶದಿ ಅಲಸದೆ ನಲಿಯುತ
ಚುಕ್ಕಿ ಮಿನುಗುತಿದೆ! ನೋಡಿದೆಯಾ!

ಈ ನಲವಿಷ್ಟೇ! ನೆಲದಗಲದ ದೇಹಿಗಳೆಷ್ಟೆಷ್ಟೊ,
ಅರಸರು ಧನಿಗಳು ಆಳುಗಳೆಷ್ಟೊ
ಹುಟ್ಟುತ ಸಾಯುತ
ಸಾಯುತ ಹುಟ್ಟುತ
ಹುಟ್ಟಿಯು ಹುಟ್ಟದ ಸತ್ತೂ ಸಾಯದ
ಸೃಷ್ಟಿಯ ಮೊದಲಿಂದೆಲ್ಲವ ನೋಡಿದ
ಚುಕ್ಕಿ ನಗುತಲಿದೆ! ನೋಡಿದೆಯಾ!

ಈ ನಗುವಿಷ್ಟೇ! ಕುಲಬಲಛಲವಿವನರಿತರಿತು,
ಕೆಲಕಿಹ ಬಡಮಂದಿಯನೇ ಮರೆತು
ಕಳೆದುದ ನೆನೆಯದ
ನಡೆವುದ ತಿಳಿಯದ
ಪಡೆಯಲದೇನಿಹುದೆಂಬುದನರಿಯದ
ಮದಮಾದಕರಸ ಕುಡಿದರ ನೋಡಿದ
ಚುಕ್ಕಿ ಅಳುತಲಿದೆ! ನೋಡಿದೆಯಾ!

ಈ ಅಳುವಿಷ್ಟೇ! ಬದುಕಿನ ಸೊಗವುಣ್ಣುವರಿಲ್ಲಲ್ಲ
ಜೀವನವನದಲಿ ತೊಳಲುತಯೆಲ್ಲ
ಹೊಟ್ಟೆಗೆ ಬಳಲುತ
ಸಾವಿಗೆ ಹೆದರುತ
ಮನಮರುಗುತಲೇ ತುಷ್ಟಿಯನರಿಯದ
ಮಾನವಕೋಟಿಯ ಅನುದಿನ ನೋಡಿದ
ಚುಕ್ಕಿ ಹಳಿಯುತಿದೆ! ನೋಡಿದೆಯಾ!

ಈ ಗುಟ್ಟಿಷ್ಟೇ! ಮಿನುಗುವುದೊಮ್ಮೆ ನಗುವುದಿದೊಮ್ಮೊಮ್ಮೆ
ಅಳುವುದು ಹಳಿವುದು ನಲಿವುದಿದೊಮ್ಮೆ;
ಕೆಲವರು ಮಿನುಗನು
ಕೆಲವರು ನಗುವನು
ಕೆಲಕೆಲರಳುವನು ಹಳಿವನು ಕಾಂಬುದು
ಒಳಗನು ಹೊರಕಾಂಬುದು ಸಹಜವಿದು.
ಚುಕ್ಕಿ ಮಿನುಗುತಿದೆ! ನೋಡಿದೆಯಾ!

## ೬ ದಿವ್ಯ ಜೀವನ ಬೇಕು

ಬಾಳುರಿಯು ಬೇಗೆಯಲಿ ಸಿಲುಕಿರುವ ಮಾನವ್ಯ,
ದನಿಗುಡುವ ಶಬ್ದಜಾಲದ ತಾರನಿಸ್ವನವ
ಕೇಳಿ ದಣಿದಣಿದು ಬೇಸತ್ತು ಬೆಂಡಾಯ್ತಾಯ್ತು
ದೇಹಪಂಜರ ಬರಿದು; ಏರಿವ ಬಗೆ ಕೊರೆವ ಮನ
ಕರಿಕಾಗುತಿರುವ ತನುವೆನಿತು ದಿನವೀ ದಾರು-
ಣಸ್ಥಿತಿಯು ಸಹಿಸುವುದು? ಉರಿ ತಣಿಪ ಜೀವಸನ-
ದೆಂದು ದೊರೆಕೊಳ್ಳುವುದು? ಹಂಬಲವು ಮಿಗಿಲಾಯ್ತು;
ಉಂಬವರು ಉಂಡುಂಡು ದಿಂಡಿನಂದದಿ ಬೆಳೆದು
ಕಾಂಬರೇ ಅಂಬೆಗಾಲಿಕ್ಕಿ ತೊಳಲುವ ಬಳಲಿ
ಬೆಂಡಾಗುತಿರುವ ಈ ಮಾನವ್ಯದದ್ಭುತ ವಿ-
ಕಾರಮಯ ದೃಶ್ಯವನು? ಕೇಳುವರೆ ಉರಿಮುರುಕ
ಗೊಳ್ಳುವಾಕ್ರಂದವನು? ಕೀಟವಾದರದೊಮ್ಮೆ
ಕಾಟವಾಗದೆ ಬಿಡದು. ಬೇಕು-ಬೇಡದರೆಂಬ-
ರಿರದೆ ಬಾಳುರಿತಣಿಪ ದಿವ್ಯಜೀವನ ಬೇಕು.

## ೭ ಕಾಣಿಕೆ

ನೆಲೆಯರಿದಾ ಕಾಲ ಜಲಧಿಯಲಿ ಮರೆಯಾಯ್ತು
ಮೊರೆಕರೆಯ ಸುಳಿಸೆಳೆಯ ವರ್ಷದಲೆಯೊಂದು;
ಮಲೆದೇಳಲನುಗೈವ ನವವರ್ಷ ವೀಚಿಯಲಿ
ತರುಣಾರುಣಪ್ರಭೆಯ ಕೈಕಾಣಿಕೆಯಿದು.

ಬಯಕೆ ಬಸಿರಲಿ ಬಳೆದ ಸವಿಗನಸ ಸವಿದುಂಡು
ತಣಿದಿಲ್ಲ, ಮುನ್ನಣಿಕೆಯರಿವಾದುದಿಲ್ಲ;
ಸೆರೆಯೇನು ನೆರವೇನು ಸೇವೆಯಲಿ ಸವೆಯಲಿಹ
ತನುಮನದ ಕಾಣಿಕೆಗೆ ವಿರತಿಯಿನಿತಿಲ್ಲ.

ಬಳಲಿಕೆಯ ಬಾಳನುತ್ಸಾಹದರೆಯಲಿ ಮಸೆದು,
ತೊಡೆದು ಜಡತೆಯ ಕೊಳೆಯ, ಕಳೆಗೊಳ್ಳುವೊಂದು
ಗೆಲುವಿನಾಸೆಯ ಸುಪ್ರಭಾತ ದೀಪಿಕೆ ಬೆಳಗೆ,
ನಳನಳಿಸಿ ತೊಳಗದೇ ಕಿರಿಯ ಕಾಣಿಕೆಯು.

## ೮ ಮುಸುವಿನ ಸಾವು

ಚೆಲುವಿನ ನೆಲೆಮನೆ ಸೊಬಗಿನ ಬೀಡದು
ಕಳಮೆಸಿರಿಯ ನಲಿವಿನ ನೆಲವು;
ಬಾಳೆಯು ತೆಂಗಿನ ಕೌಂಗಿನ ತವರೂರು
ಹಲಸು ಮಾವಿನ ನಾಡು ನಮ್ಮೂರು.

ಮಲ್ಲಿಗೆ ಸಂಪಿಗೆ ಪೂವಳ್ಳಿ ಮರಗಳು
ಅಲ್ಲುಂಟು ಇಂಚರವಕ್ಕಿಗಳು;
ಎಲ್ಲೆಲ್ಲಿ ನೋಡಲು ಅಲ್ಲಲ್ಲಿ ಕಣ್ಮನ
ವೆಲ್ಲವ ಸೋಲಿಪ ನೋಟಗಳು.

ಮಳೆಗಾಲವಾಗಿತ್ತು ಜಡಿಮಳೆ ಬರುತಿತ್ತು
ಬಿಡಲಿಲ್ಲ ಹಸುಗಳ ಮೇವಿಗಂದು
ಹುಡುಗರು ಸಾಲೆಗೆ ಹೋಗಿಲ್ಲ ತೋಟದ
ಕೆಲಸದಾಳುಗಳಂದು ಬರಲೇ ಇಲ್ಲ.

ನಡುಹಗಲಾದಾಗ ಜೋರಿನ ಮಳೆ ನಿಂತು
ಹನಿಹನಿಯಾಗಿಯೇ ಹನಿಯುತಿತ್ತು.
ನಡೆದರಲ್ಲಲ್ಲಿ ಮನೆಯ ಪುಟ್ಟ ಮಕ್ಕಳು
ತಡೆದಿಹವುಸುರೊಂದು ಬಿಟ್ಟಂತಾಯ್ತು.

ಮುಸುವೊಂದು ಮುದುಪಿನಿಂ ಮಳೆಗಾಳಿ ಹೊಡೆತದಿಂ
ಹಸಿವ ತೀರಿಸಲಾರದೊಂದಾಗಿ;
ಬಸಗೆಟ್ಟು ಬಾಳೆಯ ಪೊದೆಯಲ್ಲಿ ಅವಿತಿದ್ದು
ನಸುನಲವಿಂ ಕೂಗಿ ಹಾರಿತಾಗ.

ಕಿಟ್ಟು ಕೇಳಿದನಿದ ನೋಡಿ ನೋಡಿದ ರಾಮು
ಪುಟ್ಟುಗೋಪಿಯರೆಲ್ಲ ಬೊಬ್ಬಿಟ್ಟರು.
ಒಟ್ಟಾಗಿ ತೋಟದೊಳಗೆ ಮುಸುವಿದೆಯೆಂಬು
ತುಟ್ಟಿಸಿ ತೋರಿ ಕರೆದರೆಲ್ಲರ.

ನಮ್ಮಣ್ಣ ಸುಬ್ಬಣ್ಣ ಗುರಿಕಾರ ಇದ ಕೇಳಿ
ತೋಟಿಕೋವಿಯ ಹಿಡಿದೋಡುತ್ತ
ನೋಟವಿಟ್ಟಾ ಮುದಿ ಮುಸುವಿನ ತಲೆಗೊಂದು
ಏಟಿನಿಂ ನೆಲಕುರುಳಿಸಿ ನಕ್ಕ.

ಅರೆಬಿರಿದಲುಗುವ ಕಣ್ಣರೆ ಕೈಗಳು
ಮುಗಿದಂತೆ ಹೆಣೆದಿಹ ಬೆರಳುಗಳು.
ಕುಲುಕುವ ತಲೆ ಪಲ್ಲಕಿರಿದಿಹ ಬಾಯಿಯಿಂ
ಕಳವಳಗೊಳುವಂತೆ ಕಾಣಿಸಿತು.

ಬಿಡುಗಣ್ಣ ತೆರೆದೊಮ್ಮೆ ತಿರಿದು ಕಣ್ಣಾಲಿಯ
ನೋಡಿ ಸುತ್ತುಳ್ಳರ ಕಣ್ಮುಚ್ಚಿತು;
ಸಡಿಲಿತದರ ದೇಹವಡಗಿತದರ ಸುಯ್ಯ
ನಡೆದಾಟವಾಯ್ತಂತ್ಯವದಕೆ.

ಮೃತ್ಯು ಬಂದೂದಲದರ ಜೀವಜ್ಯೋತಿಯು
ವಿಶ್ವಜ್ಯೋತಿಯೊಳದುವೊಂದಾಗೆ
'ಸತ್ತುದು ಮುಸು'ವೆಂದು ಕೈತಟ್ಟಿ ನಗುವಾಗ
ಮೃತ್ಯು ನಗುವ ದನಿ ಕೇಳಿಸಿತೇ.

---

## ಕೆ. ಕಿಷ್ಣಣ್ಣ ರೈ

### ೧ ಹೊಸ ಹಾಡು

ನವಭಾವ-ನವಜೀವ-ನವಶಕ್ತಿ ತುಂಬಿಸುವ
ಹಾಡೊಮ್ಮೆ ಹಾಡಬೇಕು.
ತೀವ್ರತರಗಂಭೀರಭಾವನೆಯ ತೆರೆಸುಸಗಿ
ವೀರರವಯೇರಬೇಕು.
ಜಾತಿಕುಲ-ಮತ-ಧರ್ಮಪಾಶಗಳ ಕಡಿದೊಗೆದು—
ಎದೆಹಿಗ್ಗಿ ಹಾಡಬೇಕು.
ಯುಗಯುಗಗಳಾಚೆಯಲಿ ಲೋಕಲೋಕಾಂತದಲಿ
ಆ ಹಾಡು ಗುಡುಗಬೇಕು.

ಉನ್ನತೋನ್ನತ ಘನ ಹಿಮಾದ್ರಿಶಿಖರವನೇರಿ
ಹಾಡಲ್ಲಿ ಹಾಡಬೇಕು.
ಹಾಡುನುಡಿಗುಂಡುಗಳು ಹಾರಿ ದಶದಿಕ್ಕಿನಲಿ
ಭಯವ ಬೆನ್ನಟ್ಟಬೇಕು.
ಗಂಡೆದೆಯ ಗರ್ಜನೆಗೆ ಮೂವತ್ತು ಮೂಕೋಟಿ
ಕಲಕಂಠ ಬೆರಸಬೇಕು.
ಭೂಮ್ಯಂತರಾಳದಲಿ ನಭಚಕ್ರದಾಚೆಯಲಿ—
ಮಾರ್ದನಿಗಳೇಳಬೇಕು.

ಜಡನಿದ್ರೆಸಿಡಿದೆದ್ದ ವೀರಾಟ್ಟಹಾಸದಲಿ
ಭಾನು ಬುವಿ ಬೆಳಗಬೇಕು.
ನಡೆನುಡಿಗಳೆಡೆಯಲ್ಲಿ ಪದತಾಳಗತಿಯಲ್ಲಿ
ಕ್ರಾಂತಿಕಿಡಿ ತೆರಳಬೇಕು.
ಅಳಿದುಳಿದ ಭವ್ಯತೆಯ ರುದ್ರಶಿಖಿಯುಜ್ವಲಿಸೆ
ಹಾಡು ತಿದಿಯೊತ್ತಬೇಕು.

ದಿವಸ ದಿವಸಗಳಿಂದ ಮನದಿ ಮರುಗುತಲಿದ್ದೆ
ಹಾಡಿಂತು ಹಾಡಬೇಕು.
ಎನ್ನ ಪಾಡಿಗೆ ದುಃಖ ತಾಯಿಗಿದು ಹಿರಿಮರುಕ—
ನಾನಿದನು ಸಹಿಸಲೆಂತು?
ಎನ್ನ ಕೃತಿಯುಪಮಾನ ದೇವಿಗಿದೆ ದುಮ್ಮಾನ—
ನಾನಿದನು ನೋಡಲೆಂತು?
ಜಯ ಜನನಿ! ಶಿರವೆತ್ತಿ ವೀರಭರವಸೆಯಿಂದ
ಹೊಸ ಹಾಡ ಕೇಳಿ ನೋಡು.
ಇದೊ ಮೊದಲು ಮುನ್ನಿಲ್ಲ—ಮುಗಿದುದಂದಿನ ಪಾಡು
ಹೊಸತಿಂದು ಹೊಸತು ಹಾಡು.

## ೨ ಊರ್ಮಿಳಾ

ಆದಿಕವಿ ವಾಲ್ಮೀಕಿ, ರಾಮಾಯಣಾಮೃತದಿ
ಸಾಹಿತ್ಯಸುಮನಸರ ಸೊಗಬಡಿಸಲಿಲ್ಲವೇ?
ಸವಿಯುಣಿಸಲಿಲ್ಲವೇ? ಅಹುದು ನಿಜ.

ಹಿಂದಲ್ಲ ಇಂದಲ್ಲ ಮುಂದಿಗೂ ಎಂದಿಗೂ
ಆ ಕವಿಯೆ ಆದಿಕವಿ! ಅದೆ ಚಿರಂತನಕಾವ್ಯ!
ಓ ಭವ್ಯಕಾವ್ಯರ್ಷಿ! ಕರುಣೆಯಲಿ ಕಳೆಗೊಂಡ
ಸರಸತಿಯು ತಾನರಸಿ, ನಿನ್ನ ನಾಲಿಗೆ ತುದಿಯ
ತಾನೇರಿ ನಲಿಯುತಿರೆ, ಮಂದಹಾಸವ ಬೀರಿ
ಕಾವ್ಯಸೃಷ್ಟಿಯ ತೋರೆ, ತನ್ನನೇ ತಾ ಮರೆತೆ.
ರಾಮನಾಮಾಮೃತವ ಪುಣ್ಯಪಾವನ ಕಥೆಯ-
ಅಪ್ರತಿಮಸಂಪ್ರತಿಯ ಬರೆಬರೆದು ಹರ್ಷಿಸಿದೆ,
ಹಾಡಿ ಕೊಂಡಾಡಿಸಿದೆ. ಸಂಸ್ಕೃತದ ಕೃತಿರಚನೆ
ಯಲಿ ನೀನು ಕಾಳಿದಾಸಗೆ ಗಣ್ಯಗುರುವೆಂದು
ರಸಿಕಲೋಕವೆ ನಿನಗೆ ತಲೆವಾಗುತಿಹುದಯ್ಯ!

'ಸಾಗರದಿ ಮುಳುಮುಳುಗಿ ರತ್ನಗಳ ತೆಗೆತೆಗೆದು
ತಿಕ್ಕಿತೋರಿಸಬೇಕು, ಚೆಲುವ ಚೆಲ್ಲಿಸಬೇಕು,
ರನ್ನಕಂಟಿಯ ಮಾಡಿ, ನಲ್ಮೆನೀತಿಯ ನೋಡಿ
ಪ್ರೀತಿಗೀತೆಯ ಹಾಡಿ ಕೊರಳಿಗರ್ಪಿಸಬೇಕು.
ಜಗದ ಜೀವನದೊಳಿದು ಪುಣ್ಯಪೌರುಷದ ಪಥ
ಪ್ರಕೃತಿದೇವಿಯ ಸತ್ಯಪ್ರೇಮಮಯ ಪೂರ್ಣಾರ್ಥ'
ಅಹುದಯ್ಯ! ಇಷ್ಟೆಲ್ಲ ರಸಿಕರಾಜ್ಯದ ಮಾತು.
ಈ ನುಡಿಯ ಕನ್ನಡಿಯೊಳೆನ್ನ ಮುಖ ಕಾಣುವುದೆ?
ನಾನೋರ್ವನರಸಿಕನು, ಸಾಗರದಿ ಮುಳುಗಿರಲು
ಕಸಕಡ್ಡಿಯನು ತಿಳಿದು ತೆಗೆದು ನಾ ತೋರಿದೆನು.
ಅಂತಿರಲಿ, ಆ ಕವಿಯ — ಆ — ಆದಿಕಾವ್ಯವಹ
ರಮ್ಯ ರಾಮಾಯಣವ ನೀವೆಲ್ಲ ಓದಿಹಿರಿ.
ಪದದರ್ಥಭಾವನೆಯ ಸವಿಯ ಬಲುಸವಿದಿಹಿರಿ.
ಆದರವನಕ್ಷಮ್ಯದಪರಾಧ ತಿಳಿದಿಹರೆ?

ಇರಬಹುದು — ನಿಮಗೆಲ್ಲ ತಿಳಿದು ಮರೆತಿರಬಹುದು—
'ನಮಗರಿಯದಿಹ ವಸ್ತು — ಇವಗೆಂತು ಹೊಳೆದತ್ತು'
ಎಂದೆನ್ನ ಕೆಣಕುವಿರಿ — ಅದಕಾಗಿ ಬೇಡುತಿಹೆ,
ನಿಮಗೆಲ್ಲ ತಿಳಿದಿತ್ತು ತಿಳಿದು ಮರೆತೇ ಹೋಯ್ತು.
ಎನಗೆಂದು ಮರೆಯದಿದೆ ಮನವೆಲ್ಲ ಮರುಗುತಿದೆ.
ಕಡುಕಠಿನಹೃದಯನಾ ಕವಿಯೆಂದು ತೋರುತಿದೆ.
"ಭಾವನೆಯ ಬಿಂಬದಲಿ ಬಣ್ಣನೆಯ ಬೆಡಗಿನಲಿ
ಪಾತ್ರಪೋಷಣೆಯಲ್ಲಿ ಕೃತಿಚಮತ್ಕೃತಿಯಲ್ಲಿ
ರಂಜನೆಯ ರಾಗರಸರಮಣೀಯ ರೀತಿಯಲಿ
ಅದ್ವಿತೀಯನು ಕವಿಯು ವಲ್ಮೀಕತನುಭವನು.
ಕ್ರೌಂಚಮಿಥುನದ ಮೇಳನವು ಮುರಿಯೆ ಬಲುನೊಂದ—
ಸದಯಹೃದಯನ ಋಷಿಯ ಕಡುಕಠಿನನೆನಬಹುದೆ?
ನಿನ್ನ ಮಾತಿದು ಕಠಿನ ಅವನ ಕೃತಿಯಲಿ ಕರುಣ.
ರಸವೆ ರೂಪಾಂತಿಹುದ ಕಾಣಲಾರೆಯ? ಮರುಳ...!"

ಪಿತೃವಾಕ್ಯಪಾಲನೆಗೆ ಶ್ರೀರಾಮ ಸತಿಸಹಿತ
ಕಾನನವನೈದಲ್ಕೆ ಅಗ್ರಜನನನುಸರಿಸಿ
ಹಸಿವು ತೃಷೆ ನಿದ್ರೆಯಾಹಾರಗಳ ದೂರಿರಿಸಿ
ಹಗಲಿರುಳು ಸೋದರನ ಸತ್ಯಸೇವೆಗೆ ತನುವ
ಸವೆದ ತರುಣನ ಯೋಧವರ ವೀರಲಕ್ಷ್ಮಣನ
ಅರಿಯದವರಾರುಂಟು? ಧನ್ಯ ರಾಮಾನುಜನೆ!
ನೈಷ್ಠಿಕಬ್ರಹ್ಮಚರ್ಯದಿ ಬೆಂದ ನಿನ್ನೊಡಲ
ಬಿಸಿಯುಸುರು ವೀರವಿರಹದ ಕಹಳೆಯೂದುತ್ತ
ಅಂತಃಪುರದ ದೃಢಕವಾಟವನ್ನೊಡೆಯುತ್ತ
ಸಾಕೇತನಗರದಲಿ ಆ ಸತಿವಿಯೋಗಿನಿಯು
ಆ ಚಿರಂತನಸಹ್ಯವಿರಹಿಣಿ ತಪಸ್ವಿನಿಯು
ಬಳಿಸೇರಿ ನೆಲೆಯೂರಿ ಮೌನಮಂತ್ರಿಸುವಂದು
ವಿರಹದುರುವೇದನೆಯು ಹೆಂಗರುಳ ಕೊರೆಯುವುದ
ನೀನಲ್ಲದನ್ಯರಾರ್ ತಿಳಿದಿಹರು? ಬ್ರಹ್ಮಚಾರಿನ್!

ಕರುಳ ಕೊರೆಯುವ ವಿರಹದುರಿಯ ಬರೆದುಬ್ಬಿಸುವ
ಕವಿಯಹುದು ವಾಲ್ಮೀಕಿ! ಜಾನಕಿಯು ಜಾನಿಸುತ
ರಾಮಗುಣನಾಮದಲಿ ಬಲುಬೆಂದು ಬಡವಾಗಿ
ಬಸವಳಿದ ಬವಣೆಗಳನೆನಿತು ಬಣ್ಣಿಸಲಿಲ್ಲ?
ಹದಿನಾಲ್ಕು ವರುಷಗಳು ಬಲುದೂರ ಕಾಡಿನಲಿ
ಕಳೆಯಲ್ಕೆ ಹೊರಹೊರಟ ಸಿರಿಮೊಗದ ನೀರನನು
ಭೋಗಭಾಗ್ಯದ ಬಂಧನವ ಬಿಸುಟ ಬಂಧುವನು
ತನ್ನ ಪತಿಯನು ತರುಣ ಸುಂದರಸುರೂಪನನು
ನಯನಮನಮೋಹನ ಮನೋಹರಮನೋಜನನು
ಕಾಡಿಗೋಡುವ ಕಾಲದಲಿ ಕಂಡು ಮನನೊಂದ
ಆ ಊರ್ಮಿಳಾದೇವಿಯೊಂದುವೊಂದೇ ಮಾತು!
ವಿರಹವೇದನೆಗಾಗಿ ಸಾಂತ್ವನದ ಸವಿಮಾತು!
ಒಮ್ಮೆ ಕರುಣಾದೃಷ್ಟಿ, ಅಶ್ರುಧಾರಾವೃಷ್ಟಿ!

(ಕರೆಸಲಿಲ್ಲಾ! ಕವಿಯು ಕಠಿಣನಲ್ಲಾ!!)
ಎಣೆವಕ್ಕಿ ಬೇರಾಗೆ ಅದಕಾಗಿ ಮರುಗಿಹನು
ಪಕ್ಷಿಹೃದಯದ ಬೇನೆಯರಿತು ಬಲು ಬರೆದವನು
ಮೂಕಸೃಷ್ಟಿಯೊಳಾದರಿನಿತು ಕರುಣಿಪ ಕವಿಯು
ಪ್ರೇಮಪಿಂಡದೊಳಿನಿತು ಪ್ರೀತಿದೋರುವ ಋಷಿಯು
ಹಾ ಹಂತ! ಇದನಿಂತು ಮರೆಯಬಹುದೆ? ಮಹಾಂತ!
ಕವಿಯು ಋಷಿಯಹುದಯ್ಯ! ಬ್ರಹ್ಮರ್ಷಿಯಿರಬಹುದು!
ಒಳಿತಾಯ್ತು ಆ ಸಿದ್ಧಿ ಕಂಡ ಕಾವ್ಯಸಮಾಧಿ!
ಆದರವನಲಿ ಮನುಷ್ಯನ ಹೃದಯವಿಲ್ಲೇನು?
ಮಾನವನೆ ತಾನಾಗಿ, ಮನುಜನೆದೆ ಬಿರಿದೆದ್ದ
ಸ್ವರ್ಣ-ಸುಂದರ ಪ್ರೇಮದಾ ಪ್ರವಾಹವ ಮರೆತ!
"ಹದಿನಾಲ್ಕು ವರುಷಗಳು ಆ ಊರ್ಮಿಳೆಯ ಮುಖದ
ದೀನ ದಿವ್ಯಜ್ಯೋತಿ ಜಗಜಗಿಸುತಿಹ ಪರಿಯು
ಕಾಣುವುದೆ ಅಳವಲ್ಲ! ರವಿಯೇನು ಕವಿಯೇನು?"

ಓ ಮಾತೆ ಚಿರತಪಸ್ವಿನಿ! ಭಾಗ್ಯಭಾರತಿಯೆ!
ನಿನಗಂದು ನೀರನಿಗೆ ಆ ವೀರವರ್ಯನಿಗೆ
ವನವಾಸದಾಯಾಸ ಸಂಪೂರ್ಣ ಪರಿಹರಿಸೆ.
ಮಂಗಳಾರತಿಯೆತ್ತಿ ಸುಮಹೋತ್ಸವದಿ ನಲಿಯೆ
ಚೇತನವದೆಲ್ಲಿಂದ ಬಂತವ್ವ? ಆ ಚೆಲುವ-
ಚೆನ್ನಿಗನ ಕಂಡೆಯಾ ವಿದ್ಯುದ್ವಿಲಾಸದಲಿ
ಚೈತನ್ಯವಾ ಕ್ಷಣದಿ ಚೆಲ್ಲಿ ಚೇತರಿಸಿತೇ?
ಇರಬೇಕು! ಇಂತಲ್ಲದಿನ್ನೆಂತು ಬರಬೇಕು?
ಹೇಳಮ್ಮ! ಅಜ್ಞಾತವಾಸದಲಿ ನೀ ನಿಂತ
ನಿಶ್ಚಲನಿರಾತಂಕ ನಿಷ್ಠೆ ನೆನಪಾಗುತಿದೆ!
ಒಂದೊಂದು ದಿನದಿನವು ಮುಂದೊಂದು ಚಣಚಣವು
ನಿನಗೆಷ್ಟು ಕಷ್ಟಯುಗಯುಗವಾಗಿ ಸಾಗಿಲ್ಲ?
ರಸಿಕರಾಜ್ಯದ ರಮಣರಿದಕೆ ಮಂಕಾಗರೇ?
ಅರಸಿಕನು ನಾನೆಂತು ಬರೆವೆ ಕ್ಷಮಿಸಾ! ತಾಯೆ!!

---

## ಎಸ್. ವೆಂಕಟರಾಜ

### ೧ ಬಾರೆ ಗೆಳತಿ

ಹಲವು ಬಗೆಯಲಿ ಹಾಡಿ ಕೊಂಡಾಡಲಳವಲ್ಲ —
ಮೌನವೊಂದೇ ಮಂತ್ರ ನಿನ್ನ ಮನ್ನಣೆಗೆ!
ಹಲವು ಪರಿಯಲಿ ಬೇಡಿ ಬೆಂಗೊಳುವ ಹದನಿಲ್ಲ —
ಮನಸಿನೊಂದೇ ಪೂಜೆ ನಿನ್ನ ಸೇವನೆಗೆ!

ಬನದೊಂದು ಬಿದಿರಿನಲಿ ರಾಗರಸರಂಜನೆಗೆ
ಬಾರೆಂದು ತಂಬೆಲರ ಕರೆದುದುಂಟೆ?
ಹೊನಲ ಮರುಕೊಲದಲಿ ಕಾಮಕೇಳಿಯ ಕಲೆಗೆ
ಬರಸೆಳೆದು ವೀಚಿಗಳನೆರೆದುದುಂಟೆ?

ಹಲವು ಸೊಗಸಿನ ಸಿರಿಯ ಹರಕೆಗಳ ಹರಹರಹಿ
ಕಂಡು ಬಾಗುವನಲ್ಲ ನಿನ್ನ ಮೆಲ್ಲಡಿಗೆ!—
ಹಲವು ಗೈಮೆಯ ಗುರಿಯ ಸೇವೆಗಳ ಸೈಪಿನಲಿ
ನೊರಗಿ ಸಾರುವನಲ್ಲ ನಿನ್ನ ಸನ್ನಿಧಿಗೆ!

ಸೊಬಗಿನೊಂದೆಳಲತೆಯ ಭೋಗದೇಳ್ತರಕಾಗಿ
ಕೋರೈಸಿ ಮಾಮರಂ ಮಣಿದುದುಂಟೆ?
ಹರಿದೊಂದು ಗಿರಿನದಿಯ ಸಂಗಸಾದರಕಾಗಿ
ಕಡಲು ಕಾತರಿಸಿ ದಣಿದಣಿದುದುಂಟೆ?

ಸಿರಿಮೊಗದ ಬಾಸಿನಲಿ ಬೆಡಗು ಬಿತ್ತರವರಿದು
ಮನಸೋತು ಮರುಳಾಗಿ ನಲಿನಲಿವನಲ್ಲ!
ಇಂದುದುಟಿಯ ತೋಟಿಯಲಿ ಮಂದಹಾಸದ ಬರಿದು
ಬಿನ್ನಣಕೆ ಬಾಯ್ದೆರೆದು ಬಗೆವೊಲಿವನಲ್ಲ!

ಇರುಳ ವಾರಾಶಿಯಲಿ ಹರಿದೋಂದು ಕಿತ್ತ್ರರಿಲ್
ಕೋಕ ಕಲ್ಪನೆಗೆ ಸೊದೆಸುರಿದುದುಂಟೆ?
ಕಳೆಗೊಂಡ ಕತ್ತುರಿಯು ಸೌಸವದ ಪದಪಿನಲಿ
ಸರಸಮಧುಜೀವಿ ಸೈಗರೆದುದುಂಟೆ?

ಕರುಳ ಸಿಡುತಂತಿಯಲಿ ನಿನ್ನದೊಂದೇ ಗೀತಿ—
ಕರುಳ ತಂತಿಯು ಮಿಡುಕಿ ಮೊಳಗಿಸುವನಲ್ಲ!
ಕರಣಕರಣಂಗಳಲಿ ನಿನ್ನದೊಂದೇ ಪ್ರೀತಿ—
ಕರಣದೀಪ್ತಿಯು ತುಡುಕಿ ತೊಳಗಿಸುವನಲ್ಲ!

ಕೋಟೆಯಲಿ ಕಾಪಿಲ್ಲ—ಬಾಗಲಿಗೆ ಕದಪಿಲ್ಲ
ಸುಖಸಮಾಗಮಕಿಲ್ಲ ಸೂಳುಸರ್ತಿ!—
ಬಯಕೆ ಬೆಳಕೊಗೆದಾಗ ಮಮತೆಯಲಿ ಮುನ್ನಡೆದು
ಹೃದಯರಾಜ್ಯವನಾಳೆ—ಬಾರೆ ಗೆಳತಿ!

## ೨ ಚರಮ ವಿಧಾನ

ಮಧುಮಾಸದ ನವನಾಟ್ಯದ ಕಲೆಗೆ
ಅದೊ! ಕೂಗಿತು ಸಿಂಗಾರದ ಸೋಗೆ.
ಎದೆಯೊದೆಯುಬ್ಬಿನ ಸೊಬಗಿನ ಸೆಳೆಗೆ
ಸೆರೆಯಾಯಿತು ನಡುಹರಯದ ಬೇಗೆ.

ದೆಸೆದೆಸೆಗಳಲೆಣೆಯಾಟದ ಬಳಗ—
ಹುಸಿಯಾಯಿತೊ ನಸುಲಜ್ಜೆಯ ಬೀಗ!
ನನೆಮನೆಗಳಲನುರಾಗದ ಗೈಮೆ—
ತನತನಗೇ ಬಳಿಸಾರಿತು ಪರಮೆ!

ಎಳಮಾವಿನ ನಳಿದೋಳನು ಸೇರಿ
ತಳಿರೊತ್ತಿಲಿ ಸ್ವವಿಮುಕ್ತಸು ಸಾರಿ—
ತನಿವಣ್ಣಿನ ಕುಚಕಲ್ಪಕೆ ಬಾಗಿ
ಅನುಗೊಂಡನಿದೋ—ನವಶುಕಯೋಗಿ!

ಸೊಗಸೇನಿದು ಬರಿಮಾಟದ ಕನಸೆ?
ಭುಗಿಭುಗಿಲಿನ ಕಾಳ್ಗಿಚ್ಚಿನ ಮೂಸೆ!
ಮಿಗುಹಂಬಲ ಕೊನೆಕುಸುರಿಯನೂಡಿ
ಸೆಳೆದೊಯ್ವುದೆ ಈ ಜಗತಿಯ ಗಾಡಿ!

ಎನಿತೋ ಭಾವದ ಬಿನ್ನಹವೈಸಿ
ಕೊರಗಿನ ಕಂಗಳ ಕರುಣೆಯ ಸೂಸಿ—
ಸೊಗಸೊಗದಪ್ಪಿನ ಸರಸವ ಕೋರಿ
ಮರುಮರುಗಿದೆ ಮಮಹೃದಯಚಕೋರಿ!

ಮನಸಿನ ಸಂಪದ ನೆನಸಿನ ಸೂರೆ—
ನೆನಸಿಲಿ ಬಾಳುವುದೆಂತುಟೊ—ನೀರೆ!
ದಿನದಿನವಳಲಿನ ಬೇಗುದಿಯೊರತೆ—
ದಿನವೊಂದೇ ಯುಗಯೋಜನದಳತೆ!

ಮುತ್ತಿತು ಬೇಸಗೆ ಹರುಷವನಟ್ಟಿ
ಬಿತ್ತರದಾಸೆಯ ಗರಿಮೆಯನೊಟ್ಟಿ!—
ಹೊತ್ತಿತು ಹೃದಯದ ಹಲುಬಿನ ದಾಹ
ಎತ್ತೆತ್ತಲು ನೀರ್ಜಳಕದ ಮೋಹ!

ಬಾಳಿನ ಪಯಣಕೆ ಹರಯದ ದೀಪ
ನೇಹದ ನೆರಪಿಗೆ ನಡೆವ ನಿರೂಪ!—
ಭೋಗದ ತೆರಪಿನ ಬಾಗಿಲ ತೆರೆದು
ಕಾಣುವುದೇನನು?—ಬರಿದೋ ಬರಿದು!

ಮನ್ನಣೆಗಾಯಿತು ಕರುಣೆಯ ಹಾಡು
ನೆಮ್ಮದಿಗಿಹುದೇ ಮಸಣದ ಬೀಡು!
ದೂರದ ಕೊನೆಯುಲಿ ಕರೆಕರೆವನ್ನ
ಸಾರುವುದೊಂದೇ ಚರಮ ವಿಧಾನ!

## ೩ ಒಂದು ತೆರ

ದೂರದೊಂದು ಬಯಲಿನಲ್ಲಿ
ತಿಳಿಯನೀರ ಹೊನಲು ಹೊಮ್ಮಿ
ಕಡಲ ಕರೆಯ ಕೂಟಕಾಗಿ
ಹರಿವುದೊಂದು ತೆರ.
ತೀರದೊಂದು ಬದುಕಿನಲ್ಲಿ
ಹರಯ ಹುಮ್ಮಿನೊರತೆಯುಣ್ಮಿ
ಸರಸಭೋಗದರಿಕೆಗಾಗಿ
ಮೆರೆವುದೊಂದು ತೆರ.

ಬಾನಿನೊಂದು ಪದಪಿನಲ್ಲಿ
ಮುಗಿಲ ಮುಚ್ಚುಮರೆಯನೆತ್ತಿ
ಕಾಣದೂರ ಕವಲು ಮಿಂಚು
ಸುಳಿವುದೊಂದು ತೆರ.
ಮೌನದೊಂದು ಮುಹತಿಯಲ್ಲಿ
ಸೊಗಸು ಲಜ್ಜೆ ತೆರೆಯನೊತ್ತಿ
ಕೋರಿ ಕೋರಿ ಕಣ್ಣ ಸಂಚು
ಸೆಳೆವುದೊಂದು ತೆರ.

ಸೊಬಗಿನೊಂದು ಮಾವಿನಲ್ಲಿ
ಕೊನರಿತೇನು ಕಿರಿಯ ಬಳ್ಳಿ!
ಕೊನರು ಕೊನೆಯ ಮುಗುಳ ಮರ್ಮ
ಬಿರಿವುದೊಂದು ತೆರ.
ತೋಳಿನೊಂದು ತೆರಪಿನಲ್ಲಿ
ಬೆಸೆದುದೇನು ಕರ್ಮಕೇಳಿ!
ಮುದ್ದು ಮೊಗದ ನಗೆಯ ನರ್ಮ
ನಲಿವುದೊಂದು ತೆರ.

ನವ ವಸಂತಕಾಲದಲ್ಲಿ
ಕುಕಿಲಿನೊಂದು ರಮ್ಯರೀತಿ—
ದಿಕ್ಕು ದಿಕ್ಕುಗಳಲಿ ಕೂಡಿ
ಕರೆವುದೊಂದು ತೆರ.
ಮಮತೆಯೊಂದು ಮೇಳದಲ್ಲಿ
ಹರುಷದೆರೆಯ ಮಧುರಗೀತಿ—
ಭಾವಭಾವಗಳಲಿ ಮೂಡಿ
ಬೆರೆವುದೊಂದು ತೆರ.

ಕಾಡಿನೊಂದು ಕಗ್ಗವಿಯಲಿ
ತತ್ವತಾನದರಿವುಗೊಂಡು
ಯೋಗ ಭಕ್ತಿಗಳನು ತೀಡಿ
ತಣಿವುದೊಂದು ತೆರ.
ಜೋಡಿನೆದೆಯ ಸಗ್ಗದಲ್ಲಿ
ಸತ್ಯಸಂಗ ಸುಧೆಯನುಂಡು
ರಾಗರಕ್ತಿಗಳನು ಕೂಡಿ
ಕುಣಿವುದೊಂದು ತೆರ.

## ೪ ಹಾಳು ಹಂಪೆ

ಬಾನಿನರಮನೆಯ ಸೆಳೆಮಿಂಚುವೆಣ್ಣಿನ ಮೊಗದೆ
ತೋರಿಹುದು ಕಾರ್ಮುಗಿಲ ತೆರೆಯ ಸಂವರಣ.
ತಾನೆ ತಾನೇ ಕಣ್ಣ ಸಂಚಿನಲಿ ಕರೆಕರೆದು
ಕೋರಿಹುದು ಹುಮ್ಮನದ ಸಂಗ ಸನ್ಮಾನ.
ದೂರ ದೂರ ದಿಗಂತ ಚಾರು ತಲ್ಪದ ಮೇಲೆ
ಸೇರಿ ಸೈತಿಡುತಿಹುದು ನವವರ್ಷಭೋಗ.
ಕಾರಕತ್ತಲ ಮನೆಯ ಕೇರಿಯಲಿ ಕಣ್ಮುಚ್ಚಿ
ತೋರಿ ತಲೆಮರೆಸಿಹುದು ತರಳಾನುರಾಗ.

ಹೊಸತು ಜೀವನವೆತ್ತು ಮೇರೆದಪ್ಪಿತು ವೀಚಿ—
ಹೊಸತು ನಾಟ್ಯದ ರೀತಿ—ಭಾವಸಂಗೀತಿ.
ಹೊಸತು ಕಲ್ಪದ ಕೊನೆಗೆ ಜನ್ಮಜನ್ಮದ ಪಯಣ—
ಹೊಸತು ಹಬ್ಬಿಹುದೇನು ಭೋಗನಿರ್ವಾಣ!

ಕಳೆದು ಹೋಯಿತು ಕಲುಷ—ಬೆಳಗಿತೊಂದೇ ಹರುಷ—
ಬೆಳಗಿನರಿಕೆಯ ಕೋಳಿ ಕೂಗಿ ಕರೆದಿಲ್ಲ.
ಇರುಳ ಕೊನೆ ಜಾವದಲಿ ಬೆರೆದು ಬಿಗಿದಪ್ಪಿ ಮೈ-
ಮರೆದ ನಚ್ಚಿನ ಜೋಡು ಬದುಕು ಬೆದರಿಲ್ಲ.
ಮುಗುಳ ಮಿದುದೋಟಿಯಲಿ ನರ್ಮಗೀತಿಯ ನಲುಕ
ಸೊಗದೆದೆಯ ತೆರಪಿನಲಿ ಹುದುಗಿಹನು ಮಧುಪ.
ಸರಸ ಪೂರದ ಪಯೋಧರದ ಸಂಯೋಗದಲಿ
ಕವಲುಗೊಂಡಿತು ಕಾಮುಕರ್ಮವನುರೂಪ.
ದೆಸೆಗೆ ಹಬ್ಬಿತು ಕೇಗು—ನಲಿದು ತೀರದ ಹಿಗ್ಗು—
ಬಯಲ ಬಾಳುವೆಗಾಯ್ತು ಬಿನ್ನಣದ ಬೆಸುಗೆ.
ಒಗೆದ ರಸಕೇಳಿಯಲಿ ಮುಗಿಲ ಮಾಟದ ಮೊಳಗು
ಭವದ ಗೋಕುಲಕಾಯ್ತು ಸಿಂಗಾರದೊಸಗೆ.

ಮೆರೆದಿಹುದು ಮಳೆಗಾಲ. ಮಧುರಸಂಗಮಕಾಗಿ
ಕೆಲಕೆಲದೆ ಕಣ್ಣಾಸಿ ಕೊರಗಿಹುದು ಜೀವ.
ಸೆಳೆವ ನಿಟ್ಟುಸಿರಿನಲಿ ಸುರಿವ ಕಣ್ಣೀರಿನಲಿ
ಕೊನರುಗೂಡಿಹುದೇನು ನವವರ್ಷವಿಭವ!
ಬದುಕಿನೊಂದರಮನೆಯ ಬಯಕೆಮೆಟ್ಟಿಲನೇರಿ
ಕಾಣದೈಸಿರಿಗಾಗಿ ನಿಲುಕುತಿದೆ ಹರಯ.
ಗಳಿಗೆಗಳಿಗೆಗಳೆಂಬ ಕಲ್ಪಗಳನೋಲೈಸಿ
ಬರಿದೆ ಬೇವಸಗೊಂಡು ಬಳಲಿತೀ ಕಾಯ!
ಕ್ಷಣಕೆ ಮಿಂಚಿದ ಬೆಳಕು ಮುಸಗಿ ಮಾಸಿಹುದತ್ತ
ಕ್ಷಣದೆ ತೋರಿದ ಸೊಬಗು ಮರೆವುದಿನ್ನುಂಟೆ?
ಕ್ಷಣಕೆ ಮೆಚ್ಚಿದ ಸುರೆಗೆ ಸೂರೆಹೋಯಿತು ಚಿತ್ತ
ಕ್ಷಣದೆ ಮಿಾರಿದ ಮತ್ತು ಕಳೆವುದೇನುಂಟೆ?

ಜೀವನಕೆ ಕೊನೆಯುಂಟು—ಭಾವನೆಗೆ ಕೊನೆಯುಂಟೆ?
ಭಾವನೆಯ ವಿಸ್ತಾರಕಿಹುದೊಂದೆ ವಿಷಯ.
ಕಾವನೇಮದ ವಿಷಯ ಜೀವನವನುಳಿದಾಗ
ಭಾವನೆಯ ಬಿಸುಪಿನಲಿ ಹೊತ್ತಿಹುದು ಹೃದಯ!

ಕೋರಿ ಕೇಗಿತು ಮನಸು—ಕೋರಿ ಕೂಗಿದರಿಲ್ಲ—
ಕುಣಿತಕೊಪ್ಪಿದ ಬಾಳು ಬಾರದಿಹುದಲ್ಲ!
ತೀರದಾಸೆಯ ಶೂನ್ಯಧಾಮದಲಿ ಹಾರೈಸಿ
ಜೀವ ತಾನೇಕಾಕಿ ಕಾದಿರುವುದಲ್ಲ!

ಬರಿದುಬಾಳಿನ ಗುಡಿಯು ದೇವರಿಲ್ಲದ ಪೀಠ—
ಮೃತ್ಯುಮೌನದ ಮಂತ್ರ ಮೊರೆದಿರುವುದಂತೆ!
ಒಲುಮೆಯಾರದ ನೆನಹಿನೆದೆಯ ನಂದಾದೀಪ—
ವಿಲಯನಾಟ್ಯದರಂಗ—ಇದು ಹಾಳುಹಂಪೆ!

---

## ಕಡೆಂಗೋಡ್ಲು ಶಂಕರ ಭಟ್ಟ

### ೧ ಗಗನವಿಹಾರ

ಬಾನುದ್ದಕೆ ನೆಗೆದು ನೆಗೆದು,
ಬಾನಗಲಕೆ ಚಿಗಿದು ಚಿಗಿದು,
ಗಾಳಿಹೊನಲ ಬಗೆದು ಬಗೆದು,
ದೆಸೆಗೆ ದೆಸೆಗೆ ಸುತ್ತಿ ಸುಳಿದು
ಹಾರುತಿಹುದು ಬಾನಿನೋಡ,
ಬಂದು ನಿಂದು ನೋಡ ನೋಡ!
ಮನುಜಶಕ್ತಿಯೇಸಿತು ಗಾಢ?
ಭಕ್ತಿಯಿರುವ ವರೆಗೆ ಹಾಡ!

ಪಾತಾಳವು ಭೂತಳವೂ
ಓಡುತಿಷವು ಹಿಂದೆ ಹಿಂದೆ!
ಇಂದ್ರಲೋಕ ಚಂದ್ರಲೋಕ
ಇದಿರಾಗಲು ಬಹವು ಮುಂದೆ!
ತಲೆಬಾಗುತೆ ನೆಲಕೊರಗುತೆ
ಮಾಯವಾಯ್ತು ಗಹ್ವರಗಿರಿ;
ಬಾನನೆತ್ತಿ ನಡುವ ಹತ್ತಿ
ಹಾರುತಿಹೆನು ಗಗನಚಾರಿ.

ಎಳವೆಯೊಂದು ಕನಸಿನಂತೆ
ಕಾಣದಾಯ್ತು ಜನರ ಸಂತೆ;
ಬ್ರಹ್ಮಾಂಡದ ತಡಗುಂಡಿಗೆ
ಎಸೆದ ಚಿತ್ರಪಟದ ಹಾಗೆ,
ಕುಸಿದುಬಿತ್ತು ಧಾತ್ರಿ ಕುಂದಿ,
ಸೂಕ್ಷ್ಮ ಸೂಕ್ಷ್ಮ ರೂಪವೊಂದಿ-
ನಿಮಿಷನಿಮಿಷವೋಡುತಿತ್ತು
ಕಂಡು ಕಾಣದಾಗುತಿತ್ತು!

ಆಕಾಶದ ಚೀಲದೊಳಗೆ
ಬಿದ್ದ ರತ್ನರಾಶಿಯೇನು?
ಪಾತಾಳದ ತಳಿಗೆಯೊಳಗೆ
ಇಟ್ಟ ಹೂಗಳೊಟ್ಟಲೇನು?
ನಾಕದಿಂದೆ ಕಡಿದು ಬಿದ್ದ
ಸುಧೆಯ ಜೇನ ಹುಟ್ಟಿದೇನು?
ಲೋಕವಿದೋ ಮಲಗಿಪ್ಪುದು
ಕಾಲವೆಂಬ ಬಟ್ಟೆ ಹೊದೆದು!

ಹಾರಾಟವು ಚೀರಾಟವು,
ನೆರವಿಯೊಂದು ಗೋಳಾಟವು,
ಸ್ವಾರ್ಥದೊಂದು ಹೋರಾಟವು,
ವ್ಯರ್ಥವಿಭವದೇರಾಟವು,
ಆವುದೊಂದು ಮುಟ್ಟಲಿಲ್ಲ,
ಎನ್ನ ಮನವ ತಟ್ಟಲಿಲ್ಲ,
ನೆನಹಿನಿಂದ ತೊಡೆದೆ ಜಗವ
ಅದರ ದುಗುಡವದರ ಸೊಗವ.

ಎಲ್ಲಿಲ್ಲಿಯು ಶಬ್ದ ಶಾಂತಿ—
ಮೇಘಾವಳಿ ಮೊಳಗದಿಹುದು;
ಎಲ್ಲೆಲ್ಲಿ ವಿವಿಕ್ತ ಕಾಂತಿ—
ತಾರಾವಳಿ ತೊಳಗದಿಹುದು;
ಪ್ರಕೃತಿಗೆಲ್ಲ ಮೌನಮುದ್ರೆ;
ಅದರೊಳಗದೊ ಭಾವನಿದ್ರೆ;
ದಿವ್ಯಪಥದ ತೊಟ್ಟಿಲೊಳಗೆ
ತೂಗುತಿದ್ದೆ ಮಗುವ ಹಾಗೆ.

ಮುಳುಗಿದಷ್ಟು ದೊರೆಯದಿಹುದು
ಆಕಾಶದ ಆಳವೊಂದು;

ತೇಲಿದಷ್ಟು ಸಾರದಿಹುದು
ದಿಕ್ತಟಗಳ ತೀರವಿಂದು;
ಕಣ್ಣು ಕುರುಡು, ಕಿವಿಯು ಬರುಡು,
ನಾನೆನ್ನುವ ಹೆಮ್ಮೆ— ಹುರುಡು!
ಸೃಷ್ಟಿ— ಮೂಲಶಕ್ತಿ ಸಿಂಧು.
ಎನ್ನ ಜೀವವದರ ಬಿಂದು!

ಚೈತನ್ಯಸ್ರೋತದೊಳಗೆ
ಮೀನಾಗಿಯೆ ತೇಲಾಡಿದೆ
ಉತ್ಸಾಹತರಂಗದೊಳಗೆ
ತಿಮಿಯಾಗುತೆ ಹಾರಾಡಿದೆ;
ವಿಶ್ವವೆಲ್ಲ ತನ್ನದಾಯ್ತು
ತಾನೆಂಬುದು ವಿಶ್ವಕಾಯ್ತು
ಪಿಂಡಾಂಡದ ತನುವೆಂಬುದು
ಬ್ರಹ್ಮಾಂಡಕಭಿನ್ನವಾಯ್ತು.

ಒಡಲಿನ ನರನಾಡಿಯೆನಲು
ಮಿಂಚುಬಳ್ಳಿ ಸುತ್ತಿರ್ದುದು;
ಪ್ರಾಣವಾಯುವೊಂದು ಹೊನಲು
ಎನಲು ವಾಯು ಬೀಸಿರ್ದುದು;
ರೋಮರಂಧ್ರದೊಳಗೊಳಗೂ
ತಾರಾಮಂಡಲದ ಬೆಳಗು!
ಲೋಕಲೋಕ— ಕಲ್ಪಕಲ್ಪ
ಎನಗೆ ಹಾಸಿದೊಂದು ತಲ್ಪ!

ಸತ್ಯವೇನು? ಮಿಥ್ಯೆಯೇನು?
ಏನಾದರು ಆನಂದವೆ!
ನೆನಸಿದೇನು? ಕನಸಿದೇನು?
ಏನಾದರು ಸಂತೋಷವೆ!

ಬಾನೆದೆಯನು ಬೆದಕಿದನಿತು
ನೆಲದ ಹಂಗ ಹರಿದನಿತೂ
ಜನ್ಮಜನ್ಮಕೊಮ್ಮೆ ಬರುವ
ಸುಖದ ಶಾಂತಿ ಸವಿಯುವನಿತು!

ಬೆಪ್ಪನಾಗಿ ನೆಲಕೆ ಬಿದ್ದೆ;
ಮನವೊ! ಅಶ್ರುಜಲದೆ ಮುದ್ದೆ!
ಹೃದಯವೆಲ್ಲ ವಿಸ್ಮಯದಾ
**ವೇದಾಂತದ ಮುದ್ದೆ ಮುದ್ದೆ!**
ದೇಹವಿತ್ತು ನೆಲದ ಮೇಲೆ,
ಭಾವವಿತ್ತು ಮುಗಿಲ ಮೇಲೆ!
ಭ್ರಾಂತಿಯೊಳಗು ಶಾಂತಿಯಿತ್ತು
ಶಾಂತಿಯೀಗ ಭ್ರಾಂತಿಯಾಯ್ತು.

ಮಾನವನಾ ಸಾಹಸಕ್ಕೆ
ಸಾನವನಾ ಹೊಗಳಲಿರುವೆ.
ಅಜ್ಞೇಯದ ಬಯಲುನೆಲಕೆ
ಹಾರಾಡುವ ಚಿತ್ತವದುವೆ
ವಿಜ್ಞಾನದ ಧಾಟಿಯಿಂದೆ
ಹಾರಾಡಲು ಮುಂದೆ ಮುಂದೆ
ಏಕೆ ಕೊಂಡು ಕೊನೆಯದಿರುವೆ
ಎದೆದಣಿಯಲು ಹಾಡದಿರುವೆ?

## ೨ ಬೆಟ್ಟದರಸು

ಕಡಲಿನೊಡಲ ಬಗಿದು ಬಂದು,
ಬಾನಿನತ್ತ ನೆಗೆದು ನಿಂದು,
ಸಗ್ಗವದನು ಹಾಯಲೆಂದು,
ನೆಗ್ಗಿ ಕೋಡನಿದಿರು ನಿಂದು,
**ಮುಸುಗುತಿರುವೆ ಬೆಟ್ಟವೇ!**
ದರ್ಪವಿನಿತು ದಿಟ್ಟವೇ!

ಚಂಡಕಿರಣ ಕೋಟಿ ಕೋಟಿ,
ಬರಲು ಮೂಡಣಿಂದೆ ದಾಟಿ,
ನೆತ್ತಿಯೆತ್ತಿ ಹೊತ್ತು ಹೊತ್ತು
ಇಡುಕೆ, ಪಡುವಣೆಡೆಗೆ ಬಿತ್ತು;
ನಿನ್ನ ಬಲವ ಹೊಗಳೆನೇ!
ನಿನ್ನ ಚಲವ ಹಾಡೆನೇ!

ಹುಟ್ಟುನಾಡು–ನಾಗಲೋಕ!
ಮೆಟ್ಟುಮಣೆಯು–ಮನುಜಲೋಕ!
ಭುಜವನೊರಸೆ ದೆಸೆಗಳೆಂಟು!
ತಲೆಯೊಳಿರಿಸೆ ಮುಗಿಲಗಂಟು!
ಎಂಥ ಜನ್ಮ ನಿನ್ನದು?
ಎಂಥ ಪುಣ್ಯ ನಿನ್ನದು?

ಮೂಡುಗಡಿಯ ಸುತ್ತಿ ನಿಲುವೆ,
ಪಾದದಿಂದೆ ತೆರೆಯ ತುಳಿವೆ,
ತೆಂಕದೆಸೆಯ ಕನ್ನಡಿಗರ
ಬೀರಸಿರಿಯ ನಾಡಸಿರಿಯ
ವರಿಪ ಶಪಥ ನಿನ್ನದು!
ಪೊರೆವ ಪಂಥ ನಿನ್ನದು!

ಮುಗಿಲ ಮರೆಯೊಳಿಟ್ಟು ಮೊಗವ
ಏತಕಿಂತು ಅಳುವ ಭಾವ?
ನೇತ್ರವತಿಯ ನಯನವಾರಿ
ಮೊರೆಯುತಿಹುದು ಕಡಲ ಸೇರಿ,
ಮೌನವೇನು ನಿನ್ನೊಳು?
ಧ್ಯಾನವೇನು ನಿನ್ನೊಳು?

ಕಾಲ ಬಂಜೆಯುಪ್ಪುದೇನು?
ವೀರನೊಬ್ಬನುದಿಸನೇನು?
ನಿನ್ನ ಹೆಗಲ ಹತ್ತಿ ಹಾರಿ
ಸಿಡಿಲಿನಂತೆ, ಕೀರ್ತಿಭೇರಿ
ಹೊಡೆದು ಧನ್ಯನೆನಿಸನೇ?
ನಾಡ ವಾನ್ಯನೆನಿಸನೇ?

ಮೂಡುನಾಡ ಬೆಟ್ಟದರಸು!
ನಿನಗೆ ಯಾವ ಯುಗದ ಕನಸು?
ಅದರ ಸೊಬಗಿಸಿಂದು ಬರಿಸು,
ಎಂದು ಬಾಳುವಂತೆ ಹರಸು,
ನಮ್ಮ ನಾಡು ಮೆರೆಯಲಿ!
ಸುಗ್ಗಿಹಸುರ ಮುರೆಯಲಿ!

ಸಪ್ತಶರಧಿಯಾಚೆ ತಡಿಯ
ಒತ್ತಿನೂಕು ನಾಡಗಡಿಯ!
ನಮ್ಮ ನುಡಿಯು ಗೆಲವು ಗುಡಿಯ
ಎತ್ತಿ ನುಗ್ಗು ಬಾನಕಡೆಯ!
ನಮ್ಮ ಕೀರ್ತಿ ನೆಗ್ಗಲಿ!
ನಮ್ಮ ಮೂರ್ತಿ ಹಿಗ್ಗಲಿ!

ಪಡುವ ಕಡಲ ತೆರೆಯ ಹಾಗೆ
ಹಾರಿ ಹಾರಿ ಮೇಗೆ ಮೇಗೆ,
ಬೆಟ್ಟದರಸ! ನಿನ್ನ ತೆರದೆ
ತಲೆಯ ಬಾಗದೆತ್ತಿ ಭರದೆ,
ಬಾಳಲುಂಟೆ? ಬಾಳ್ವೆವು,
ಅಲ್ಲದಿರಲು ಸಾವೆವು.

## ೩ ವಿರಹಿ

ವಿರಹಿ ಮೃತ್ಯು ಕರೆವ ಹೊತ್ತು
ಎಂತು ಬರುವಿರಿ?
ಆವ ಗಾಡಿ ಯಾವ ಮೋಡಿ
ಎಂತು ನೆರೆವಿರಿ?
ಕಂಬನಿಗಳ ಮಾಲೆಯೇನು?
ಪುಲಕಚಾರುಚೇಲವೇನು?
ಆವ ತೊಡವನುಟ್ಟು ನಡೆವ
ಬಯಕೆ ನಿಮ್ಮದು?
ಆವ ಬುದ್ಧಿ ಯಾವ ಶುದ್ಧಿ
ಎಂತು ಸಲುವುದು?

ಮಧುರಹಾಸ ಕುಸುಮವಂದು
ಬಾಡದಿರುವುದೆ?
ಹೃದಯರಸವು ಕೆಸರುಗಟ್ಟಿ
ಕೋಡದಿರುವುದೆ?
ಕುಸುಮಶರನ ಬೇಟೆಗಾಡು—
ಒಲುಮೆಹಕ್ಕಿ ಹಾರ್ವ ಗೂಡು-
ಹಾಳುಗೆಡೆವ ಗುಡಿಯ ಗೋಡೆ-
ಒಡಲು, ಜರಿಯದೆ?
ತುಂಬಿ ತುಳುಕಿದಾಸೆ ಮೂಡ
ಹರೆಯ ಹರಿಯದೆ?

ಗಾಳುದೊತ್ತು-ಮುಪ್ಪುಸುತ್ತು
ಸುಳಿಯುಲಿರುವಳು.
ನರೆಯ ಮರೆಯ ಸನ್ನೆಮಾಡಿ
ಕರೆಯುಲಿರುವಳು.
ಜೀವದಂತೆ ಜೀವವಿಹುದೆ?
ಭಾವದಂತೆ ಭಾವವಿಹುದೆ?

ಒಂದು ಕೂಟಕೊಂದು ಸೊಬಗ
ವಿರಹಿ ಕಾಂಬನು.
ಒಂದೆ ಮುತ್ತಿನೊಂದೆ ತುತ್ತಿ
ನಿಂದೆ ಹೀರ್ವನು.

ಪ್ರಣಯಿ ಮೃತ್ಯು ನುಡಿಸುವಾಗ
ನುಡಿವಿರೇನನು?
ಕಾಣಿಕೆಗಳ ಬಯಸುವಾಗ
ಕೊಡುವಿರೇನನು?
ಮಾಡಲಿಹುದ ಮಾಡಲಿಲ್ಲ;
ಎಮ್ಮ ಬಾಳ್ಕೆ ಸಫಲವಲ್ಲ;
ಎಂದು ಒಡೆದ ವೀಣೆಯಂತೆ
ಮೂಗುವಡುವಿರೇ?
ಬಂಜೆ ಹೆಣ್ಣ ತೊಟ್ಟಿಲಂತೆ
ತೊನೆಯುತಿರುವಿರೆ?

ಅವನ ಕರುಣವೆಂಬ ಕಿರಣ
ತನುವನುಡುಗಿತು.
ಅವನ ಕಾಂತಿ ದಿವ್ಯಶಾಂತಿ
ಬೆಳ್ಳಗೆಡೆಯಿತು.
ಇರುಳಿಗಿಂತ ಕುರುಡನಾದೆ!
ಬಂಡೆಗಿಂತ ಬರಡನಾದೆ!
ಚೆಲುವು ನಲವು ಸೃಷ್ಟಿಗಿತ್ತು
ಕರಣಕರಿಯುದು;
ಎಂದು ನುಡಿದೆ, ದಿಂಡುಗೆಡೆದೆ
ಕೂಡಿಕೊಂಬುದು?

---

## ಕೆ. ಶಂಭು ಶರ್ಮ

### ಸಾಹಿತ್ಯ ಸಾಮ್ರಾಜ್ಯ

ಕರ್ಣಾಟದಲ್ಲಿಂದು ಸಾಹಿತ್ಯ ಸಾಮ್ರಾಜ್ಯ
ಪಟ್ಟಕ್ಕೆ ಯುವರಾಜಕವನವೇರಿದುದನ್ನು
ಮುದುವರಸುಕಬ್ಬವಾದರದಿಂದ ನೋಡಿ ಹಿರಿ-
ಹಿಗ್ಗಿ ಹರಸುವ ದಿನವು. ವಿಜಯದಶಮಿಯು ಕಳೆದು
ನಾಳೆ ದಿಗ್ವಿಜಯಕ್ಕೆ ಹೊರಡಲನುವೆಂಬಂತೆ
ಹೊಸಹುರುಪುಗೊಂಡಿರುವುದಾನಂದವೆಲ್ಲರಿಗೆ.

ಸಾಹಿತ್ಯಸಾಮ್ರಾಜ್ಯದಾಳಿಕೆಯು ಬಾಳಿಕೆಯು
ರವಿಶಶಿಗಳಿರುವನಕ ನೆಲೆನಿಲ್ಲಬೇಕೆಂಬ
ಬಯಕೆಹರಕೆಗಳಿಂದ ನನ್ನ ಬಿನ್ನಹವೊಂದು.

ಸಾಹಿತ್ಯಸಾಮ್ರಾಜ್ಯಸಂಧಿಕಾಲಗಳಲ್ಲಿ
ಗೊಂದಲಗಳಾಗುವುದು ಸಹಜವಿದೆ. ಧೀರರಾ
ಗೊಂದಲಗಳೆಡೆಯಾದದಂತೆ ಚತುರತೆಯಿಂದ
ಮುಂದುವರಿದಣಗಿಸುವ ಸಾಹಸವನೆಸಗುವುದು
ಶಾಂತಿನೆಲೆಗೊಳಿಸುವುದು ಕಾಂತಿಕಲೆಗಳಿಸುವುದು.

ಹಿಂದೆ ನೃಪತುಂಗಾದಿರಾಜಕವಿಗಳು ಮುಂದೆ
ಬಂದು ಕರ್ಣಾಟಸಾಹಿತ್ಯಸಾಮ್ರಾಜ್ಯದ-
ಲ್ಲೆಂದಿಗೂ ಸುವ್ಯವಸ್ಥೆಯು ನೆಲಸಬೇಕದುವೆ
ಚೆಂದವೆಂದಧಿಕಾರದಿಂದ ನಿಯಮಿಸಿ ನಡೆದು
ಮುಂದಿಯನ್ನೂ ನಡೆಸಿ ನಿರ್ಜರಯಶಃಕಾಯ
ಹೊಂದಿದರು. ನಿಯಮಾನುವರ್ತನೆಯೆ ಸುಖಹೇತು.

ನಿಯಮವು ವಿಶೇಷಸಾಮಾನ್ಯಭೇದಗಳಿಂದ
ತೆರನೆರಡು. ಮೊದಲನೆಯದೊಮ್ಮೊಮ್ಮೆ ಬದಲುವುದು.
ನಿಯಮವೆರಡನೆಯದೆಂದೆಂದಿಗೂ ಬದಲುವುದೆ?
ಕಾಲಗತಿ ಬದಲಿ ಕೆಲನಿಯಮಗಳು ಯಮರೂಪ
ತಾಳಿದರೆ ಜನಮತದ ಹೊಸನಿಯಮವುಂಟಾಗಿ
ಪಾಲಿಸಲ್ಪಡುವುದೇ ಪ್ರಕೃತಿನಿಯಮವು. ರಾಜ-
ಕವಿಗಳೇ ಶಾಸಕರು. ಸಹೃದಯರೆ ಪೋಷಕರು
ಸುವಿಮರ್ಶೆಯಿಂದ ಋಜುನಿಯಮಕ್ಕೆ ನೆಲೆವಾತಿ
ಕಪಿತಂದು ದೂಷಿಸುವ ಕಂಟಕನ ಕಿತ್ತಿಕ್ಕಿ
ಕ್ರಮತಪ್ಪದಂತಿರಿಸಿ ಸಾಹಿತ್ಯಸಾಮ್ರಾಜ್ಯ
ರಮಣರು ಸ್ವರ್ಗೀಯಸುಖವುಂಡು ಸುಖಶಾಂತಿ
ನೆಲೆಗೊಳಿಸಿ ಬಾಳುವರು. ನಿಯಮವಿಹಾರುವ ಜನರ
ಮಲಿನಕೃತಿ ಸಾಮ್ರಾಜ್ಯಸುಖಶಾಂತಿಗೆಡಿಸದೇ?
ಕೊಲೆಕಳವುಹುಸಿಗಳಾಗದವಾಗಬಹುದೆಂದು
ಕೆಲರು ಕೈಗೊಂಡರದು ಹೊಸಧರ್ಮವೆನಿಸುವುದೆ?
ಕೂಡಲೇ ತಡೆದದನ್ನೊಡನೆಯೆ ನಿಗ್ರಹಿಸ
ಬೇಡವೆಂದೆಂದಿಗೂ ಯಾರಾದರುಸುರುವರೆ?
ನೆಲಸಿದ ಸನಾತನಸುನಿಯಮಗಳು ಬದಲುವುವೆ?
ಪ್ರಲಯವೇ ತಲೆಮೇಲೆ ಸಲಿಯದೇ ಬದಲಿದರೆ?

ಎಸೆವ ಹೂವನ್ನು ಹೊಸಕಾಯಿ ಕಸಗೈವಂತೆ
ಹೊಸ ಭಾಷೆಯೆಸೆವ ಹಳೆಭಾಷೆಯನ್ನೆಸಗುವುದು.
ವ್ಯಾಕರಣಗೀಕರಣ ನಿಯಮಗಿಯಮಗಳೀಗ
ಬೇಕಿಲ್ಲ. ಹಳೆಯವವು ಹಳೆಭಾಷೆಗೆಂದರೂ
ಹೊಸಭಾಷೆಗಾದರೂ ಹೊಸನಿಯಮ ಬೇಡವೇ?
ನಿಯಮವಿರುವುದು ಶಬ್ದದೊಡನರ್ಥವಿರುವಂತೆ.
ನಿಯಮವಿದ್ದಂತೆ ಬರೆದಿಡುವುದೇ ವ್ಯಾಕರಣ.
ನಿಯಮವಿದು ಕೆಲಕಾಲಕೊಮ್ಮೆ ಬದಲಾಗುವುದು.

ನಿಯಮವಿಲ್ಲದ ಶಬ್ದವರ್ಥನಿರಹಿತವಾಗಿ
ಉಲಿಯುವುದು ಬಾನಲ್ಲಿ ಗುಡುಗಿನ ಧ್ವನಿಯಂತೆ.

ಪ್ರತಿಭಾನಸಂಸ್ಕಾರಶುದ್ಧಭಾವನೆಯೆಂಬ
ದ್ರುತಸುವರ್ಣವನೆದೆಯ ಕುಲುಮೆಯಿಂದೆತ್ತಿ ಪರಿ-
ನಿಷ್ಠಿತಸುಶಬ್ದವೆಂಬ ಕರುವಿಗೆ ಸುರಿದು
ಸಾರ್ಥಕವದಾದಾಗ ಕೃತಿಮೂರ್ತಿ ಲೋಕಕ್ಕೆ
ಪೂಜ್ಯವಾಗುವುದೆಂಬುದೆಲ್ಲರೊಪ್ಪುವ ಮಾತು.
ಪ್ರತಿಭಾನ ಸಂಸ್ಕಾರ ಭಾವನಾ ಶಬ್ದಾರ್ಥ-
ವೈಕಲ್ಯವೊಂದೊಂದರಿಂದಲೇ ಕೃತಿ ವಿಕೃತಿ
ರೂಪಾಗಿ ಸಹೃದಯರ ಹೃದಯಮಂದಿರದಲ್ಲಿ
ಸುಪ್ರತಿಷ್ಠಿತವಾಗದಾರಾಧ್ಯವಾಗದದು.

ಅಭ್ಯಾಸಕೃತಿಗಳಿಂದಭ್ಯಾಸಮಾಡುವವ
ರಭ್ಯಾಗತಾತಿಥ್ಯವನ್ನು ಪಡೆಯುತ್ತಿರಲು
ಸಭ್ಯತಮಸುಕೃತಿಕೃತಿ ಮೋರೆಮುರಿಸುವುದಿನ್ನು.
ಬೆಳೆಯುವೆಳಮಕ್ಕಳಲ್ಲೀ ವಿಕಳಕೃತಿಗಳ-
ನ್ನುಳಿಸಿ ಕಳೆಗೊಳಿಸಿ ಫಲಗಳಿಸುವಾಶಯದವನು
ಕಳಮೆಗದ್ದೆಗಳಲ್ಲಿ ಕೊಣಲೆ ಬತ್ತವ ಬಿತ್ತಿ
ಕೆಯ್ ಬೆಳೆಸಿ ಫಲಪಡೆಯದಾರಂಬದವನಂತೆ.
ಅಚ್ಚುಸಾಲೆಗಳುಂಟು ವೆಚ್ಚಕ್ಕೆ ಹಣವುಂಟು
ಮೆಚ್ಚುವುದು ತನ್ನ ಮನವೆಂದು ಹೊರಗೆಡಹುವುದೆ?
ಮುಚ್ಚಿಡುವುದೊಳ್ಳಿತಭ್ಯಾಸಕವಿತೆಗಳನ್ನು.

ಈಹೊತ್ತು ಹೊಸಕವಿತೆ ವಿಶ್ವರೂಪವ ತಾಳಿ
ನಲಿದಾಡತೊಡಗಿರುವುದದರ ಭಾವಾರ್ಥವೊಂ-
ದದರ ಗಮ್ಯಾರ್ಥವೊಂದದರ ವಾಚ್ಯಾರ್ಥವಿ-
ನ್ನೊಂದು ಮತ್ತೊಂದರ್ಥವರಿಯದಿದೆ.

* * * * *

ಬಹುಮುಖದ ಶಬ್ದಗಳು ಸಾವಿರಾರಬ್ದಗಳ
ಮುಂಚಿನಂಚಿನೊಳಿದ್ದ ಕೆಲ ಶಬ್ದರೂಪುಗಳು
ತಿರುಳುಕನ್ನಡರೂಪು ತಳಿಮುಕನ್ನಡರೂಪು
ಕುರುಳುಕನ್ನಡರೂಪು ಕೆರಳುಕನ್ನಡರೂಪು.
ಹಳೆಯ ಕೊಳೆರೂಪುಗಳು ಬೆಳೆದ ಕಳೆರೂಪುಗಳು.
ಮೊಳಕೆಯೊಳಗುಳಿದ ಕೆಲಮುಗುಳರಳುರೂಪಗಳು
ಸಾರ್ವಕಾಲಿಕಸಾರ್ವದೇಶಿಕಾಕಾರಗಳು
ಛನ್ದಸ್ಸುಬಂದಂತೆ ಪಾದವಿನ್ಯಾಸಗಳು
ಬಾರಿಬಾರಿಗೆ ತೋರಿ ಬೆರಗುಗೊಳಿಸುತ್ತಲಿವೆ.

*    *    *    *    *

ಅಡಿಯ ಗೆಜ್ಜೆಯು ನಡುಗಿ ಲಜ್ಜೆಗೊಳುತಿದೆ ಹೆಜ್ಜೆ
ಕೆಲವಲಂಕಾರಗಳು ಕಳಚಿ ಬೀಳುತ್ತಲಿವೆ.
ಕೆಲವು ಕಡಿಪುಡಿಯಾಗಿ ಸುರಿದು ಜೋಲುತ್ತಲಿವೆ
ಮುಡಿಯ ತೊಡರಡಿಗಡಿಯ ತೊಡರು ಮುಡಿಯೆಡೆಯಲ್ಲಿ
ಮಾಲೆ ಮೂಲೆಯೊಳುಂಟು ರೂಪಕದ ರೂಪಿಲ್ಲ
ಎಕ್ಕಸಕ್ಕವಿದಸ್ತವ್ಯಸ್ತವಾಯ್ತು ಸಮಸ್ತ
ವಿವರರಿವಿಗಿನ್ನೊಂದು ದಿವ್ಯ ಹೃದಯವು ಬೇಕು.
ನರನಯಿಾಕಣ್ಣುಗಳು ನೋಡಲಾರವಿದನ್ನು
ಸೌಮ್ಯರೂಪವು ಬೇಕು. ವಿಶ್ವರೂಪವು ಸಾಕು!

ಕನ್ನಡದ ಕಸ್ತೂರಿ ಮಿರುಗುವಾ ಸಂಸ್ಕೃತದ
ಚಿನ್ನ ಕರಡಿಗೆಯಲ್ಲಿ ತಾನಡಗಿಕೊಂಡಿತ್ತು.
ಈ ಹೊತ್ತು ಪಾಶ್ಚಿಮಾತ್ಯರ ಸೆಂಟುಬಾಟಲಿಯ
ಗಂಟಲೊಳಗಿದ್ದಧಿಕಗಂಧಬಂಧುರವಾಗಿ
ಹೊರಗೆ ತೋರಿಸಿಕೊಂಡು ಚೆಂದವೆಂದೆನ್ನಿಸಿದೆ.
ದೇಶಕಾಲಗಳಿಂದ ವೇಷಭಾಷೆಗಳಂದ
ವಂದಂದಿಗಲ್ಲಲ್ಲಿ ಚೆಂದವೆಂದೆನಿಸುವುದು.
ಹಳೆಗದ್ಯಪದ್ಯಗಳ ಶುದ್ಧಸಮರೂಪಗಳ
ಶಬ್ದಗಳ ರೂಪಗಳು ಬಲುಸುಂದರಗಳಂದು.

ಹೊಸಗದ್ಯಪದ್ಯಗಳ ವಿಷಮರೂಪತೆಯೊಂದು
ವಿಷಯವೆಲ್ಲರ ಬಗೆಗೆ ವಿಷಮವಾಗುವುದಿಂದು.
ಹೊಸಪದ್ಯಕಾವ್ಯಗಳು ವಿವಿಧಕಾಲಿಕ ಶಬ್ದ
ರೂಪಗಳನೊಳಕೊಂಡು ಕೆಲವಲಂಕಾರಗಳ
ನನುಚಿತಜ್ಞತೆಯಿಂದ ಕಳೆಗೆಡಿಸಿ ತಳೆಗೊಂಡು
ಭಾವನಾಪ್ರಕಟನೆಯ ವಿಕಟರೂಪುಗಳಿಂದ
ಹದಗೆಟ್ಟ ಪರದೇಶಭಾಷಾನುಕೃತಿಯಿಂದ
ಸಹೃದಯರ ಹೃದಯಕ್ಕಹೃದ್ಯವಾಗುವುದಿಂದು.
ಸಾವಿರಾರಬ್ದಗಳ ಮೊದಲಂದಿನಿಂದಲೂ
ಕಾವೇರಿಯಿಂದಲಾ ಗೋದಾವರೀನದಿಯ
ಕಡೆಯ ಗಡಿಯಾದೆಲ್ಲ ನಾಡು ಕನ್ನಡತಾಯಿ
ಯಾಡುಹೊಲವೆಂದಿತ್ತು. ಮಕ್ಕಳಾಲಸ್ಯದಿಂ
ದಾ ನಾಡು ಕಾಡೆಂದು, ನರಿಗಳಿಗೆ ಬೀಡೆಂದು
ನೋಡಿದವರಾಡಿದರು. ಮುಂದೆ ನಾವೊಂದಾಗಿ
ಕೂಡಿ ಕನ್ನಡನಾಡ ಬೆಳಗಿ ಕನ್ನಡಿನಾಡು
ಮಾಡಿ ತೋರಿಸಬೇಕು, ಹೊಗಳಿಹಾಡಿಸಬೇಕು.
ನಮ್ಮ ಸಮ್ಮೇಲನವು ಮಾರ್ಗದರ್ಶಕವೆನಿಸಿ
ಕನ್ನಡದ ಕಂಪನ್ನು ದೆಸೆದೆಸೆಗೆ ಹರಡಿಸಲಿ.
ಕನ್ನಡದ ನಗುಮುಖದ ನವ್ಯಕಾವ್ಯಗಳೆಂಬ
ಕನ್ನಡಿಗಳಲ್ಲಿ ವಾಗ್ದೇವತೆಯ ಮುಖಬಿಂಬ
ಬಿಂಬಿಸಲಿ. ವಾಙ್ಮಾತೆ ನವಕವನಗಳ ಕದಪು
ಚುಂಬಿಸಲಿ. ನವರಸಗಳಮೃತಧಾರೆಗಳಿಂದ
ತುಂಬಿಸಲಿ ಸಹೃದಯರ ಹೃದಯಾಂತರಾಳವನು.
ಹಳೆಯ ಕಾವ್ಯಗಳಲ್ಲಿ ಗೌರವವು ನೆಲಸಿರಲಿ.
ಎಳೆಯ ಕಾವ್ಯಗಳಲ್ಲಿ ಜನರಿಗಾದರವಿರಲಿ.
ಭದ್ರವಾಗಲಿ. ಶುಭವು ಬರಲಿ. ಮಂಗಲವಿರಲಿ.

---

## ಸೇಡಿಯಾಪು ಕೃಷ್ಣ ಭಟ್ಟ

### ೧ ಮದಾಲಸೆಯ ಜೋಗುಳ ಹಾಡು

(ಛಂದೋವತಂಸ)

ಕೆಸರ ತುಳಿದು ನೀರೊಳಂಟದೆ ಮೇಗೆ
ಹೃದಯಸೌರಭವನೊಪ್ಪಿಸಿ ವಿಕಾಸಲಾಗೆ,
ತಾವರೆಯಂತೆ ಮದಾಲಸೆಯರಳಿ
ವಿಹಾರಿ ನಿಂದಳು ಸಂಸಾರದ ಸರಸಿಯಲಿ.

ಎರೆಯನೆದೆಯ ತಂತಿಯನು ಮಿಡಿಯುವಳೊ?
ಬಲಿದ ಮೋಹದ ಶೃಂಖಲೆಯ ಸಡಿಲಿಪಳೊ?
ತುಡುಕಿ ಕಾಲನ ಕೈಯ ಪಾಶವೆಳೆವಳೊ?
ಮಡದಿ ತನ್ನಯ ಮುದ್ದುಮಗನ ತೂಗುವಳೊ?

"ಮರಿಗಿಳಿಯೇ! ವಿಧಿ ಬರೆದೊಂದು ಸುಳಿಯೆ!
ಪರಮರಸವೆ ಕೋಡಿ ಘನಿಸಿದ ಹರಳೆ!
ಗಗನವನಳೆವ ಸುಪರ್ಣನೆಂದರಿಯೆ,
ಸಿಲುಕಿ ನೀನಸ್ಥಿಪಂಜರದಲಿ ನಲಿವೆ!
— ಜೋ ಜೋ.

"ಸರ್ಗದ ಸ್ವಾತಿಗೆ ಕಡಲಲ್ಲಿ ಬಿದ್ದೆ,
ಸುಪ್ತಿವಡೆದು ಮುತ್ತಿನಂತೆ ಮೇಲೆದ್ದೆ;
ಯಮುನ ಸೋದರಿ ಹಾರಕೆಂದೊಯ್ವ ಮೊದಲೆ
ಶಿವನಕ್ಷಮಾಲೆಯ ಮಣಿಯಾಗು, ಹಸುಳೆ!
— ಜೋ ಜೋ.

"ತನುವೆಂಬ ಕೊಳಪಿಯೊಳಾಸೆಯ ತುಂಬಿ
ಜರೆಯುಚ್ಚುಗೋಲಿಂದ ಶತಮುಖವಾಗಿ
ಹೊರ ಹೊಮ್ಮಿಸುವ ಬಣ್ಣ ವಿಧಿಯಿಕಾವ ಮೊದಲೆ
ಕೊಳಲಾಗಿ ಕೊಡು ಪರಮಾತ್ಮನ ಕೈಗೆ.
— ಜೋ ಜೋ.

"ಎನಿತೊ ಭವದ ಸುಕೃತವನಡವಿಟ್ಟೆ
ನೆಲಕರೆಗಳಿಗೆಗೊಡೆಯರಲಿ ಹುಟ್ಟೆ;
ಅಮೃತವ ಮೊಗೆವ ಗಿಂಡಿಯೆ! ಕೊಬ್ಬು ಮೊಗೆವ
ಅರಸಿಕೆಗೈತಂದೆ, ತೆಗೆ ತೆಗೆ ಮನವ!
— ಜೋ ಜೋ.

"ತಣಿವ ಹೂಳಿದ ಗೋರಿಗಲ್ಲೊ, ಗದ್ದುಗೆಯೊ?
ಮದದ ಪರ್ವತದೊಣಹುಲ್ಲೊ, ಚಾಮರವೊ?
ತೊಡುವಾಭರಣವೆಲ್ಲ ಸುಡಲಿಹ ಕೆಂಡ;
ಯಮನೂರಿಗೂರುಗೋಲಾ ರಾಜದಂಡ.
— ಜೋ ಜೋ.

"ಸಿರಿವಂತಿಕೆಯ ಬಾಳು ಮದನನ ಬಾಳು!
ನೆರಿವ ಹರೆಯದ ಬೆಂಕಿಯೊಳದು ಕಾದು
ಹೃದಯತೀರ್ಥವ ಹೀರಿ ಹರಿತವು ಮೀರಿ
ಕೊರೆಯೆ, ಬದುಕಲುಂಟೆ ನಿಜಸುಖವಲ್ಲಿ?
— ಜೋ ಜೋ.

"ಕಣ್ಗಳ ಮುಸುಕಿಸಿ, ಎದೆಯ ನಡುಗಿಸಿ,
ಮಾರ್ಗವ ಮರೆಯಿಸಿ, ಕಾಲ ಕುಸಿಯಿಸಿ
ಕಾರ್ಗಾಲದಿರುಳಂತೆ ಕಾಮನ ಸರಳು
ಭೋರ್ಗರೆಯುವ ಮುನ್ನ ನಿಜಧಾಮಕೇರು!
— ಜೋ ಜೋ."

## ೭ ವಿಜಯನಗರ-ಧ್ವಂಸ

ಲಕ್ಷ್ಮಿ ಮೆಚ್ಚಿ ಮೆಚ್ಚಿ ಕುಣಿದ
ನಾಟ್ಯರಂಗದಲ್ಲಿ ಭೂತ-
ಯಕ್ಷರಕ್ಷರಂದು 'ಕೋಲ' ಕುಣಿಯುವಂತೆ ಕಂಡಿತು;
ಹಜ್ಜೆಗಳಲಿ ನೂಪುರಗಳ
ರತ್ನರಾಜಿಯುಲಿದ ರಾಜ-
ಮಾರ್ಗದಲ್ಲಿ 'ಗಗ್ಗರ'ಗಳ ಘರ್ಘರರವ ಕೇಳಿತು.

ಸಿರಿಯ ಮಣಿಯ-ದೇಗುಲದಲಿ
ತುದಿಯ ಮಾಡದಲ್ಲಿ ತೂಗಿ
ತೊನೆವ ಘಂಟೆ ಕಡಿದು ನೆಲಕುರುಳ್ದು ಬಿರಿದು ಹೋಯಿತು;
ಹುರುಡೆ ಹುಟ್ಟುಗುಣದ ಕಾಲ-
ದನುಜ ನಿರ್ಘೃಣೆಯಲಿ ಬೇಳ್ದ
ಪುರುಷನೃಷಭಮೇಧಧೂಮ ಸುಳಿದು ಸುತ್ತಿ ಮುತ್ತಿತು.

ಕನ್ನಡಿಗರ ಭಾಗ್ಯನಿಧಿಯ
ಭರಿತದಲ್ಲಿ ಸೂರೆಗುಡಿವ
ಹುಮ್ಮಸದಲಿ ಯವನಸೇನೆ ವಡಬನಂತೆ ನುಗ್ಗಿತು.
ನಮ್ಮ ದೇವ! ನಮ್ಮ ರಾಯ!
ನಮ್ಮ ರಾಮರಾಯ! ಎಂದು
ನಮ್ಮ ನಗರ ತೆರೆಯ ತೆರದಿ ಮೊರೆದು ಚೆಲ್ಲಿ ಕೆಡೆಯಿತು.

ಸಿಡಿಲು ಮುಗಿಲ ರೆಕ್ಕೆಗಳನು
ಬಡಿದು ಮಿಂಚುಗುತ್ತುವಂತೆ
ಹಲಗೆವಿಡಿದ ತುರುಕದಳವು 'ಕಡಿತಲೆ'ಯಲಿ ಕುತ್ತಿತು;
ಕೆದರುದಲೆಯ ಬೆದರುಬಾಯ
ಬಡಿವ ಕೈಯ ಬೀಳ್ವ ಮೈಯ
ಬಡವುಗಳನು ಪಂತವಾಡಿ ತರಿದು ತರಿದು ಸೊಕ್ಕಿತು.

ನಗರಸಿರಿಯ ಸುಲಿವ ಖೂಳ-
ತೆಗೆ ನೃಸಿಂಹಮೂರ್ತಿ ಕನಲಿ
ಕುದಿದು ತನ್ನ ಶಿಲೆತನಕ್ಕೆ ಬಲಿದು ಹಲ್ಲ ಮೊರೆಯಲು
ಜಗುಳೆ ಕೋರೆ, ಮುಖ ಕರಾಲ-
ತರವಿಕಾರಗೊಳ್ಳಲದರ
ಬಳಿಗೆ ಬರ್ಬರೌಘ ಬಂದು ಬಗುಳಿ ಹಲ್ಲ ಕಿರಿಯಿತು.

ಜಗದ ಕಣ್ಣ ಕುಟ್ಟುವಂತೆ,
ಪಳಿಕುನೆಲದ ಹೊನ್ನ ಹೊದೆದ
ಚೆಲುವ ಮಂಟಪಗಳ ಘನಫಿರಂಗಿಗಳಲಿ ಸುಟ್ಟರು;

ಜಗಕೆ ವಿಷವನೆರೆಯುವಂತೆ,
ಹಸುಳೆಹೆಂಗಳೊಡಲ ತರಿದು
ಬಸಿವ ನೆತ್ತರೋಕುಳಿಯನು ನದಿಗೆ ಹರಿಯಬಿಟ್ಟರು.
ಹಗೆಗಳಿಂತು ನಗರದಲ್ಲಿ
ಧಗಧಗಿಸುತ ರೌರವವನು
ನಗಿಸಿ ಯವನ ಬಾವುಟವನು ನಟ್ಟು ನಲಿದು ತಣಿದರು;
ಮೊದಲವೇನೊ! ವಿಧಿಯ ರಥಕೆ
ಹೂಡಲಾಗಿ, 'ಹುಲಿಗಳಾಗಿ
ಬಗಿದು ತಿಂದೆವೆ'ನುತ ಬಾಯ ಚಪ್ಪರಿಸುತ ಕುಣಿದರು.

### ೩ ಏಕಾಂತ

ಕಳೆದ ಕರ್ಮಗಳು, ಸುಖದುಃಖಂಗಳದ್ಯತನ
ರತಿವಿರತಿಗಳು, ಬರುವ ಭಾಗ್ಯಫಲವೃಕ್ಷಗಳ-
ನಡರುವೆಣಿಕೆಗಳೆಲ್ಲ,— ಹಗಲ ಹೋರಾಟದಲಿ
ದಣಿದಿನಿತು ವಿಶ್ರಾಂತಿಯನು ಪಡೆಯಲೆಂದು ನಿ-
ರ್ಜನದೇಶವನು ಹುಡುಕಿ ಬಳಿಸಾರೆ,— ಬಂದೆನ್ನ
ಬಲಹೀನ ತನುಮನವ ಮುತ್ತಿ ಹೋರಾಡುವವು!
ಜಗದೊಳೇಕಾಂತವೆಂಬುದದೊಂದು ಬರಿ ಹೆಸರೆ?
ಗಹನಮರುಭೂಮಿಯಲಿ ಕುಣಿವ ಮೃಗಜಲದೊಸರೆ?
ಅಧಿಕಾರಪರ್ವತವನಡರಿ ಬಳಲಿದರಂತೆ;
ಬಹುಶಾಸ್ತ್ರಸಾಗರವ ದಾಂಟಿ ತೊಳಲಿದರಂತೆ;
ಸುಖದ ಖನಿಗಳ ಸೂರೆಗೊಂಡು ಮರಳಿದರಂತೆ;—
ಕಡೆಯೊಳವರೇಕಾಂತದಲಿ ಕಂಡು ಶಾಂತಿಯನು,
'ಜಗವೆ! ಜೀವನದ ಹೋರಾಟದಲಿ ಕೊರಗದಿರು;
ತಣಿವುದೇಕಾಂತದೊಳಗೆ'ಂದು ಸಾರಿದರಂತೆ.
ಜನತೆಯೊಡನಾಟದಲಿ ನಿಮಿಷವೂ ಸುಖವಿಲ್ಲ;
ವಿಜನತೆಯನೇಕಾಂತವೆಂದರದು ನಿಜವಲ್ಲ.

ವಾಯಾಭಿನಯಗಳಿಂ ಬಹುಭಂಗಿಗೆಡೆಯಾದ
ಲೋಕದಾಟವ ಸೃಜಿಸಿದವನ ನೋರೆಯುಸಿರಿಯೊ!
ಆವಾವ ಕಡೆಗೆ ಬಯಕೆಗಳನಾರೆಳೆಯುವನೊ
ಆ ರಂಗನಾಯಕನ ಸೂತ್ರದೊಲವನು ತಿಳಿಯೆ!
'ಏ-ಕಾಂತ! ನೀ ಗತಿ'ಯೆನುತ ಕಾತರಿಸಿ ಕರೆದೆ;
ಶಾಂತಿ ಹನಿಹನಿಯಾಗಿ ತನಿದಂಪನೀಯುತಿದೆ;
ಏಕಾಂತವೆನಲೊಂಟಿತನವಲ್ಲ; ಮನದ ಹರಿ-
ವೇಕಾಂತವಹುದೆ ನಿಜದೇಕಾಂತವದೆ ಶಾಂತ.

## ೪ ಕೃಷ್ಣಾಕುಮಾರಿ

ನೊಳೆದು ಮೊನೆಗಂಡಾಗಿ, ಕಳದಲಿ
ಬಳಿದು ಚಲಗಂಡಾಗಿ, ಸಮರವ
ಕುಡಿದು ಮುಳಿಗಂಡಾಗಿ, ಕಾಲನ ದವಡೆಯನು ನುರಿ-
ಸೆಳೆದು ಕೆನ್ನಾಲಗೆಯನದರಲಿ
ಮಲಗಿ ಮಲೆದರದಾರೊ, ಮರುಭೂ-
ಮಿಯಲಿ ಜೀವವ ಬಿತ್ತಿ ಗಂಡಿನ ಸಿರಿಯ ಬೆಳಸಿದರು,-

ಅವರ ಬಸಿರಲಿ ಹೇಡಿ 'ಸಿಂಗ'ನೆ?
ಅಮರನಂದನದಲಿ ಪಲಾಂಡುವೆ?
ಸುರಪತಿಯ ಮಿಸಸೆಗೆ ನರೆಯೆ? ದಿಗ್ಗಜಕೆ ಕುರಿಗೂಸೆ?
ಹರಿದನೇ ರಾಣೇಂದ್ರವಂಶದ
ಧವಲಮೌಕ್ತಿಕಸರವ! ಹೆಸರಿನ
ಹೆರೆಯನಗಿದನೆ! ಪೌರುಷದ ಮಣಿಯನು ಬಿಸಾಡಿದನೆ!

ಮಗಳ ಕರಕಮಲಕ್ಕೆ ಹಾರುವ
ಅಳಿಯೆದೆಯ ದುರುದುಂಬಿಗೊಬ್ಬಿನ
ನೊರಜುಗಳ ನುಗ್ಗೊರಸಲಾರದೆ, ನೆಲಕೆ ಹೊರೆಯಾದ

ಶಿರವ ಮರಗೈಯಲ್ಲಿ ಮಲಗಿಸಿ
ಮಲಗಿರಲು,— ಲಲಿತಾರುಣಾಂಬರೆ,
ಅಪರಸಂಧ್ಯಾದೇವಿಯಂತಿರೆ, ಬಂದಳರಗುವರಿ.

ಮೊಗಕೆ ಕತ್ತಲೆಯಾಯ್ತು; ನಯನದ
ಹೊಲಬು ಮಾಸಿತು; ಮನದ ಹೊದರಲಿ
ತಲೆಯ ಮರಸುತ ಸುರುಳಿತಬಲಾಘಾತಿ ದುರ್ಬುದ್ಧಿ;-
"ಮಗಳೆ, ಮಗಳೇ!" ಎನುತ ಮುಂದಿನ
ನುಡಿಯನರಿಯದೆ, ಕೊಲೆಯ ಕೊಂಡಾ-
ಟದಲಿ ಹಿಡಿವಂತಪ್ಪಿದನು ಕೃಷ್ಣಾಕುಮಾರಿಯನು.

"ತಂದೆ ನಿನಗೇಕಿಂದು ಕಳವಳ?
ಬಂದುದೇನು ವಿಪತ್ತು? ಧೈರ್ಯದ
ಸಂದು ಕಡಿದಂತಿದೆಯಲಾ!" ಎನೆ, ತಡೆದು ಗದಗದಿಸಿ-
"ನೊಂದಿಹೆನು, ಮಾತಾಡಲೇಂ! ನಿ-
ನ್ನಿಂದ ಮೇವಾಡಕ್ಕೆ ವಿಲಯವೆ?
ಕಂದ! ಬರುತಿದೆ ಸಕಲರಾಜಸ್ಥಾನನೃಪಸೇನೆ!

"ತನತನಗೆ ಕೊಡು ಕೊಡು ಎನುತ ಮದ-
ಮುದಿತ ನೃಪಕಲಭಗಳು ಕರವನು
ತುಡುಕುತಿರಲಾರ್ಗೀವೆನೋ! ಸುತೆ! ನಿನ್ನ ಹೆತ್ತೆನಗೆ
ಗತಿಮತಿಗಳಳಿದುವು; ಮಹಾಹವ-
ಕುದಯಪುರವಸ್ತಮಿಸದೇ? ಸುಂ-
ದರಿ! ವನಾಂತಕೆ ನಡೆವೆನಾದೊಡೆ ನಿನ್ನನೆಲ್ಲಿಡಲಿ!"

ಎನುತ ತಲೆಗುಸಿಯುತ್ತ, ಹರಣದ
ಭಯ ಕೊಳೆದು ನಂಜಾದ ದುರ್ಧರ-
ಹೃದಯದುರ್ಗಂಧವನು ಸೂಸಿದನಿಂತು ನಿರ್ಲಜ್ಜ-:

"ಹೆಣವ ಹುಗಿಯುದೆ ಹದ್ದುಗಳ ಹಾ-
ರಿಕೆಯು ತಡೆಯಲಿಕಹುದೆ? ವಿಷವನು
ಕುಡಿದು ಮಡಿ! ಮರುನುಡಿಯದಿರು ಮಗಳಾದೊಡೆನಗೆ"ಂದ.

ಬೆದರಿದಳೆ? ಕೆದರಿದಳೆ? ನಲ್ನುಡಿ
ತನುವ ಪಡೆದಂತುಸಿರಿದಳು—"ನಗು-
ನಗುತ ಮಡಿವುದು ರಾಜಪುತ್ರಿಯನನ್ಯಸೌಭಾಗ್ಯ!
ಮಡಿವೆನಂಜದಿರಾದೊಡೊಂದನು
ನುಡಿವೆ;—ನೀ ಮಗಳೊಡನೆ ಮಾನವ
ಮಡುಹದಿರು; ಕುಲದುರಿಗಳಿದು ಮಸಿಗೇಡವಾಗದಿರು!

ಅರಿಯೆಯಾ ಚಿತ್ತೋರ ದುರ್ಗದ
ಪರಮಪುಣ್ಯಾಹುತಿಯ ಭೂತಿಯ?
ಕುಲದ ದೈವವನೇಕಲಿಂಗನ ನೆನೆನೆನೆದು, ಕೈಯ
ಖಡುಗವರಿರಕ್ತದೊಳಗೀಸಾ-
ಡುತಿರೆ, ಘುಡುಘುಡಿಸುತ ದಿಗಂತದ
ಹೊಡೆಗೆ ಕೀರ್ತಿಯನಪ್ಪಳಿಸಿದ ಪರಾಕ್ರಮಾರ್ಣವರ?

ಗಂಡುಗಲಿಗಳು ನಲಿನಲಿದು ರಿಪು-
ರುಂಡಗಳ ಚೆಂಡಾಡೆ,—ಪಂಕಜ-
ಷಂಡದಲಿ ಜಲದೇವಿ ನರ್ತಿಸುವಂತೆ, ಧಗಧಗಿಪ
ಕುಂಡದಲಿ ಕುಣಿಕುಣಿದು ಪುಲಕದ
ತಂಡ ಬೆವರಲಿ ತುಳುಕೆ, ವಿಲಯದ
ತಾಂಡವನ ತುಳಿದಾಡಿ ಪದ್ಮಿನಿಯೊಡೆಗೆ ನಡೆಯುವೆನು!"

ಧುರದ ವಾರ್ತೆಗೆ ನಡನಡುಗಿ ನರ-
ನರಿ ಮುಸುಡ ತಿರುಹುತ್ತ ನಡೆದನು;
ಕಳುಹಿದನು ಹಾಲಾಹಲವ ಹೊಸ ಹೊನ್ನ ಬಟ್ಟಲಲಿ!

ಕೊರಗಿದಳು, ವೀರತೆಯ ಬರಗಾ-
ಲದಲಿ ಬಾಡುವ ತುಲಸಿಯೆನೆ! ಕೈ-
ವಿಡಿವಳಿನಿಯನ ಗಲ್ಲವನೆ ಹಿಡಿವಂತೆ ಬಟ್ಟಲನು!

ಅಂಬುಜದ ಬಾಯ್ದೆರೆಗೆ ಸಿಡಿಲಿನ
ತುಂಬಿ ಹೊಕ್ಕಿತು! ಪದ್ಮಿನಿಯು ಪದ-
ದಿಂಬನೇ ನೆನೆಯುತ್ತ ನುಂಗಿದಳಕಟ! ಕೊಲಲಾರೆ
ಕಂಬುಕಂಧರೆಯಿವಳನೆ'ಂದಾ
ನಂಜು ಮರಳಿತ್ತೆನಲು, ಹಿಮದಲಿ-
ತಾಂಬುಜಾನನೆ ಕಾರಿದಳು, ಭೂತಳದಿ ಹೊರಳಿದಳು!

ಮರಳಿ ಕುಡಿದಳು, ಮತ್ತೆ ಕಾರಿದ-
ಳಬಲೆ! ಹಾಲಾಹಲಕೆ ಕೈಯೇ
ಮಿಗಿಲೆನಲು ತಂದಿತ್ತ ನವವಿಷರಸವ ಕೈಕೊಂಡು,—
"ಪಡೆದೊಡೆಯ! ದಕ್ಕಿಸು ವಿಷವ; ನಿ-
ನ್ನಡಿಗೊಡಲನೊಪ್ಪಿಪೆ! 'ಸಿಸೋದಿಯ'-
ಕುಲದ ಪೂರ್ಣಾಹುತಿಯ ಕೈಕೊಳ್ಳೆ"ನುತ ಹೀರಿದಳು!

ಬೀತು ಹೋಯಿತು ರಾಜಪುತ್ರರ
ಪೂತ ತೇಜದ ಕೆಂಡಸಂಪಗೆ!
ಘಾತಿಸಿದ ವನಹರಿಣಿಯಂತೆ ಕುಮಾರಿ ಕೆಡೆದಿರಲು,—
ಕಾತರಿಸಿ ಕುರರಿಗಳ ತೆರದಲಿ
ಹಾತೊರೆಯಿತಂತಃಪುರವು! ವಿಷ-
ವಾತಪೆನೆ ವಾರ್ತೆಯನು ಸಂದೇಶಿಸಿದನರಿಗಳಿಗೆ.

"ರಣಕೆ ಹೆದರಿದ ಹೇಡಿ! ಮಗಳನು
ಮಡುಹಿದಧಮ!! ಕುಲೀನವಂಶದ
ಕೊಡಲಿ!!! ನಿನ್ನನು ಸದೆವೆವೆ"ನುತರಸರು ಸಮೂಹಿಸುತ

ಖಡುಗದೋಲೆಯು ಕಳುಹೆ,— ಹೌಹಾ-
ರುತ, ಕುರುಡು ಕುರಿಯಾಗಿ, ದುರ್ಮಂ-
ತ್ರಿಗಳ ಕುರುಬತನಕ್ಕೆ ಕುಲನೆಲಗಳನು ಮಾರಿದನು!

ನರಗೆ ಬಾಗದ ಹಣೆಯು ಬೆಳಗಿದ
ಘನಕಿರೀಟವನಡಿಮುಗುಚಿ 'ಕುಂ-
ಪನಿ'ಯ ಬಾಗಿಲ ಭಿಕ್ಷೆಯೋಡನು ಮಾಡಿ. ಮುಂದವಡೆದು
ಸವಿದನುಂಬಳಿಯುಂಬಲಿಯ! ಕೈ-
ಮುಗಿದು ಕೊಂಡನು ವೈರಿಭೀತಿ-
ಜ್ವರಕೆ ಹೊದೆಯುಲು ಪರರ ಸಾಮಂತಿಕೆಯ ಕಂಬಳಿಯ!!

ಮೊದಲದೊಬ್ಬ ಕನೋಜನೃಪ ಮಗ-
ಳಿದೆಗೆ ಶೂಲವನಿಕ್ಕಿ, ಸ್ವಾತಂ-
ತ್ರ್ಯವನು ಘೋರಿಗೆ ಮಾರಿ ಸತ್ತನು; ಮತ್ತೆ ಮರುಹುಟ್ಟ
ಪಡೆದು, ಮಗಳನು ತಿಂದು, ಮಾಸವ
ಹುಗಿದು, ಬದುಕಲು ಕುಂಪನಿಯ ಬಾ-
ಯುಗುಳ ನುಂಗಿದನವನೆ; ನಿಜ! ಇತರಂಗಿದರಿದರಿದು!!

---

## ಎದುರ್ಕಳ ಶಂಭು ಭಟ್ಟ

### ೧ ಬಡವೆಯ ಬದುಕು

ಪ್ರಕೃತಿಯುಟ್ಟ ಸೆರಗಿನೊಳಗೆ ಮೊಗವನಿಟ್ಟು ನಲಿಯುತಿದ್ದೆ
ಮಾತೆಯವಳು ನೀತಿಯುಣಿಸೆ ಕತೆಯ ಹೇಳ್ದಳೊಂದನೆನಗೆ
ಅದನೆ ಬಾಲ ಭಾವದಿಂದ ನಿಮಗೆ ಹೇಳ್ವ ಬಯಕೆಯಾಯ್ತು
ಅಣ್ಣ ಕೇಳಿ! ಊರಮುಂದೆ ಮೂಡಗಿರಿಯ ತಪ್ಪಲಲ್ಲಿ
ಸುತನಧಾಮನಿಧಿಯ ಪಡೆದು "ಭಾನುಮತಿಯು" ಎನಿಸಿಕೊಂಡು
ಬಡವೆ ಬಾಳುತಿರುವಳೊಬ್ಬಳವಳು ನಮಗೆ ಹೊಸಬಳೇನು?
ನಿತ್ಯ ನಮ್ಮ ಕಣ್ಣ ಮುಂದೆ ಕಾಂಬ ತಾಯಿ ಜಗಕೆ ತನ್ನ-
ಕರುಳನಿತ್ತು ಕಣ್ಣಕೊಟ್ಟು ಪೊರೆಯುತಿರುವ ಪುಣ್ಯತಾಯಿ
ಆಕೆಯೂರನಾಳುವವನು ಅಮರರೊಡೆಯನಾದರೇನು?
ಊರಿಗರಸನೊಬ್ಬನಿರಲು ಸುಖವು ಜನಕೆ ತಾನೆ ಬಹುದೆ?
ಅಡವಿಗರಸು ಸಿಂಹವಿರಲು ಎರಳೆ ಸೌಖ್ಯ ಪಡೆಯಲುಂಟೆ?
ಕೊಬ್ಬಿದಾನೆಯಡಿಯ ಹಿಡಿದು ಮೊಲವು ಬದುಕಿ ಬಾಳಲುಂಟೆ?
ಅಂತೆ ಪದವಿಗಿತ್ತು ಮನವ ನಾರಿಯರಿಗೆ ತೆತ್ತು ತನುವ
ಜನವ ಮರೆತು ಮೆರೆಯುವರಸನಾಳುತಿರಲು ಬಡವೆಗಿಲ್ಲ
ವಾಸಿಸಲ್ಕೆ ಗುಡಿಸಲೊಂದು ಉಡುವುವಕ್ಕೆ ವಸನವೊಂದು
ಗಿರಿಯ ಶಿರವೆ ಬೆಸಲೆವನೆಯು. ಬಡವು ಬದುಕ ಬರೆಯಲೇನು?

ಬಡವೆಯಿರಲಿ ಸಿರಿಯ ಹಿರಿಯ ಮಗಳೆ ಇರಲಿ ಸಿಂಹವಿರಲಿ
ಮೊಲವೆ ಇರಲಿ ಗಿಡವೊ ಮರವೊ ಯಾವುದಿರಲಿ ಲೋಕದಲ್ಲಿ
ಮಕ್ಕಳನ್ನು ಪಡೆವ ಬಯಕೆ ಜೀವಿಗಿಹುದು ಸಹಜವಷ್ಟೆ!
ಉಳಿದ ಭಾಗ್ಯವೇಕೆ ಬೇಕು? ಮಕ್ಕಳೊಂದು ಭಾಗ್ಯವಿರಲು
ಇಹಕೆ ಸಾಕಿದೆಂದು ಈಕೆ ಶಿಶುವ ಬಯಸಿ ಪಡೆದುದಕ್ಕೆ
ತೂಗಲೊಂದು ತೊಟ್ಟಿಲಿಲ್ಲ ಹಾಸಲೊಂದು ಹಸೆಯೆ ಇಲ್ಲ.

ತನ್ನ ತೊಡೆಯ ತೊಟ್ಟಿಲಲ್ಲಿ ಎಂತೊ ಹೇಗೊ ಸಾಕಲವಳು
ನಿಮಿಷದಲ್ಲಿ ಮಗುವು ಬಳೆದು ಬಡವೆ ಮನೆಗೆ ದೀಪವಾಯ್ತು.
ಧರೆಯ ಕಣ್ಗೆ ಹಬ್ಬವಾಡಿ ಲೋಕಬಂಧುವೆನಿಸಿಕೊಂಡು
ಅಡಿಯ ಮುಂದಕಿಡುತಲಿತ್ತು ತೇಜ ಬೀರಿ ಮೆರೆಯುತಿತ್ತು.

ಲೋಕಬಂಧುವಾದ ಶಿಶುವು ತಾಯ ತೊಡೆಯಲಿಂತು ನಲಿಯೆ
ಪೊಡವಿ ತಾನು ಕಣ್ಣಬಿಟ್ಟು ನೋಳ್ಪುದೆಂಬ ತೆರದೆ ಕುಸುಮ-
ವರಳುತಿತ್ತು. ಬಂಧುವನ್ನು ಹೊಗಳುವಾಸೆಯಿಂದಲೇನೊ?
ವಿಹಗ ಕುಲವು ಗೂಡುಬಿಟ್ಟು ತನ್ನ ತೊದಲುನುಡಿಗಳಿಂದ
ಹಾಡಿನಲಿಯುತಿತ್ತು. ಜನವು ಕರವ ಮುಂದೆ ನೀಡಿ ನೀಡಿ,
"ಬಾರೊ ಬಾರೊ ಬೆಳಕನಿತ್ತು ಕತ್ತಲೆಯನು ಕುತ್ತಿಕೊಲ್ವ
ವೀರ ಬಾರೊ ಸೂರ ಬಾರೊ, ಬಾರೊ ನಮಗೆ ಕಣ್ಣಕೊಟ್ಟು
ಜಗದ ಜೀವನಕ್ಕೆ ಬೆಳಕನೀವ ಲೋಕಚಕ್ಷು ಬಾರೊ
ಪರಮ ತೇಜವನ್ನು ಬೀರಿ ಮೆರೆಯುವಂಶುಮಾಲಿ ಬಾರೊ"
ಎಂದು ಮಮತೆಯಿಂದ ಕರೆಯುತಿತ್ತು. ಕರೆಯದಿರುವುದೆಂತು?
ಮುದ್ದುಮಗುವನೆತ್ತಿಕೊಳ್ಳದಿರುವರಾರೊ? ನಮಗೆ ಮಗುವೆ
ದೇವರಿತ್ತ ದಿವ್ಯದಾನವಲ್ಲವೇನು? ಸೃಷ್ಟಿಯಲ್ಲ-
ದೊಂದು ಚಂದವಸ್ತುವಲ್ಲವೇನು? ಲೋಕಕಿರುವ ಮೇಲ್ಮೆ-
ಯೇರು ಮೆಟ್ಟಿಲಲ್ಲವೇನು? ಕುಲದ ಕುಡಿಯದಲ್ಲವೇನು
ಲೀಲೆಗೆಯ್ವ ಮುದ್ದು ಮಗುವ ನೋಡಿ ಹರ್ಷಗೊಳ್ಳುವಲ್ಲಿ
ಜಾತಿನೀತಿ ದೀನಧನಿಕರೆಂಬ ಭಾವವಿಹುದೆ? ಜಗದಿ
ಮಕ್ಕಳನ್ನು ಕಂಡದಾವನೊಬ್ಬ ಹರ್ಷಗೊಳ್ಳದಿಹನೊ
ಅವನು ಮನುಜನಲ್ಲ ಜೀವವಿಲ್ಲದೊಂದು ಮಣ್ಣಹೆಂಟೆ.
ಲೋಕಬಂಧುವೆನಿಸುವವಗೆ ಅನ್ಯರೆಂಬರುಂಟೆ ಜಗದಿ
ಮಂದಿಯೆಲ್ಲ ಬಂಧುಬಳಗ, ಪ್ರಕೃತಿಯೆಲ್ಲ ಹಿತದ ದೈವ;
ಆದಕತದಿ ತನ್ನ ಬಯಸಿ ಕರೆವರನ್ನು ಹರ್ಷಗೊಳಿಸೆ
ತವಕ ಪಡುವ ಶಿಶುವು ತಾಯತಳ್ಕೆಯಿಂದ ನುಸುಳಿ ಮುಂದೆ
ನೆಗೆದು ನೆಗೆದು ಓಡಿಬಂದು ತಾಯಮನಕೆ ಮರುಕತಂತು.

ಕಾಯಿ ಬಲಿಯೆ ನೆಲಕೆ ಬೀಳ್ವುದೆಂದು ತೊಟ್ಟು ಬಾಡುವಂತೆ,
ಹಸುಳೆ ಬೆಳೆದು ಸಿಕ್ಕಿದೆಡೆಗೆ ಹರಿಯುವಾಗ ತಾಯ ಹೃದಯ-
ವದಕೆ ಬರುವ ಕೇಡ ನೆನೆದು ಚಿಂತೆಗೊಳ್ಳದಿರುವುದೆಂತು?
ಅಂತವಿಲ್ಲದಾಡುವೊಲದೆ ಶಿಶುವದಿಂತು ಹರಿಯುತಿರಲು
ಮಾತೆಯಿವಳು ಹೋಗಲೆಂದು ಮೌನದಿಂದ ಇರುವಳೆಂತು?
ಕಂದನೋಡಿದೆಡೆಯ ಬಿಡದೆ ಛಾಯೆ ಒಡಲ ಬಿಡದ ತೆರದೆ
ಹಿಂದೆ ಹಿಂದೆ ಓಡುತದರ "ಎನ್ನ ಮುದ್ದು ಮಗುವೆ ಬಾರೊ
ಉದಯಗಿರಿಯ ಸಿಂಹ ಬಾರೊ, ಆಟಗಳನು ಸಾಕುಮಾಡೊ
ಉಂಡು ಕುಡಿದು ಮಡಿಲಲೊರಗೊ" ಎಂದು ಕೂಗಿಕೊಂಡಳಿವಳು.
ಆದರೇನು? ಎಳೆಯ ಮನವ ತಡೆಯಲಳವೆ? ಪಾದರಸವ
ಹಿಡಿಯಲಳವೆ? ಬಾರೆನೆಂದು ಆಚೆಯಿಾಚೆಯೋಡುತಿತ್ತು.
ತಾಯಿಮಕ್ಕಳಾಟವಿದನು ನೋಡಿ ಲೋಕ ಸುಖಿಸುತಿತ್ತು.

ಹಸುಳೆಯಾಡಿ ಜನನಿ ಬೇಡಿ ಹಲವು ದೂರ ಹರಿಯಲಾಗಿ
ಪಡುವಣೆಡೆಯ ಸಿಂಧುದೇಶವವರಿಗಾಗ ಕಾಣಬಂತು.
ಅಲ್ಲಿಗೊಡತಿಯೆನಿಸಿದವಳು ಇವಳ ತಂಗಿಯಾದರೇನು?
ಬನ್ನಿರೆಂದು ಕರೆವರಿಲ್ಲ: ಕುಳ್ಳಿರೆಂದು ಹೇಳ್ವರಿಲ್ಲ.

ತಂಗಿಯವಳು ಭಾಗ್ಯದೊಡತಿ ಬಿಂಕವನ್ನು ಪಡೆದ ಸುದತಿ
ಅವಳ ಭವ್ಯ ಭವನವೇನು! ರತ್ನದೊಂದು ರಾಸಿಯೇನು!
ಮಗಳ ಸಿರಿಯ ಕೊಟ್ಟು ಹರಿಯ ಮನೆಗೆ ಪಡೆದ ಪುಣ್ಯವಂತೆ;
ಅಮೃತವಿತ್ತು ಅಮರರೊಡನೆ ನಂಟುಗೊಂಡ ಭಾಗ್ಯವಂತೆ.
ಬಡವೆಯಿವಳು ಭಗಿನಿ ಬಂದರವಳ ಕಣ್ಗೆ ಕಾಂಬುದೆಲ್ಲಿ?

ಆವಳಿವಳೊ ಮರುಳೆಯೆಂದು ಹಾಸ್ಯಗೆಯ್ಯುತಿದ್ದಳವಳು.
ತನ್ನ ತಂಗಿಯಿಂತು ಗೆಯ್ವ ಹಾಸ್ಯ, ಬೆಂಕಿಯಾಗಿ ಇವಳ
ಮಾನವೆಂಬ ಕಲ್ಪತರುವ ಸುಟ್ಟು ಮುಖಕೆ ಕಪ್ಪ ತಂತು.
ಮಮತೆಯೊಸರ, ಹೃದಯಕಲಶದಿಂದ, ಕುದಿಸಿಕಣ್ಣಿನಲ್ಲಿ
ಚೆಲ್ಲಿಸಿತ್ತು; ಹಸುಳೆಗಾಗಿ ಅವಳ ಜೀವ ಮಾಸಲಿತ್ತು.

ಧಾವಿಸುತ್ತ ಬರುವ ಶಿಶುಗೆ ಮೊದಲಿನಂತೆ ತೇಜವಿಲ್ಲ
ಆದರದಕೆ ತಾಯ್ಮ ಮೋಹಪಾಶ ಬಿಡಿಸುವಾಶೆಯೇನೊ?
ನಿಲ್ಲದೋಡುತಿತ್ತು. ದಣಿವ ಕಳೆಯೆ ಠಾವ ಹುಡುಕುತಿತ್ತು.
ಮನುಜನಂದ ಹರುಷದಲ್ಲಿ; ಪೊಡವಿಯಂದ ಸುಗ್ಗಿಯಲ್ಲಿ:
ಹರುಷಗೊಂಡು ಹಸುಳೆ ಬರಲು ಮಮತೆಯಿಂದ ಕರೆವರೆಲ್ಲ.

ಬಳಲಿ ಬಾಡಿ ಬಣ್ಣಗೆಡಲು ಕರೆವರಿಲ್ಲ ಕೇಳ್ವರಿಲ್ಲ;
ಅರಳೆ ಮೊಗ್ಗು ಪಡೆವರುಂಟು ಒಣಗಲದರ ಪಡೆವರುಂಟೆ?
ತಂಗಿಯಿರಲಿ ತಮ್ಮನಿರಲಿ ಬಂಧುಬಳಗವೆಷ್ಟೆ ಇರಲಿ,
ಭಾಗ್ಯವಿದ್ದರುಂಟು ನಂಟು; ಇಲ್ಲದಿದ್ದರದುವೆ ನಮ್ಮ
ಬಾಳಿನೆಳೆಗೆ ಬಿದ್ದ ಬಿಡಿಸಬಾರದಿರುವದೊಂದು ಗಂಟು.
ತಾಯ ತಂಗಿ ತನಗೆ ಮುನಿವಳೆಂದು ಹಸುಳೆ ಬಲ್ಲುದೇನು?
ತನ್ನ ಮಗಳ ಹಿರಿಯತನಕೆ ಹರಗೆ ವಿಷವ ಕೊಟ್ಟಳೆಂದು
ಗಿರಿಯನಡಗಿಸಿಟ್ಟು ಬಂಧುಗಳಿಗೆ ಮೋಸಗೈದಳೆಂದು
ಇವಳು ದುಷ್ಟೆಯೆಂದು ಎಳೆಯ ತಿಳಿಯ ಮನಕೆ ತಿಳಿದುದೇನು?
ಹಾವ ಹೆಡೆಯ ನೆಳಲ ನಂಬಿ ಭೇಕವೋಡುವಂತೆ, ಬಳಲಿ
ಠಾವ ಬಯಸಿ ನೀಚೆಯುವಳ ಭವನದೆಡೆಗೆ ಓಡಿತೊಡನೆ.
ತಾಯಿ ಕಂಡು "ಮಗುವೆ! ನೀನು ಆಕೆಯೆಡೆಗೆ ಹೋಗಬೇಡ
ಆಳವಾದ ಜಲಧಿಯಿಹುದು, ಅವಳ ಹೃದಯವರಿಯೆ ನೀನು;
ಬಾರೊ ಮಗನೆ, ಏರಲೇಳು ಕುದುರೆಗಳನು ನಿನಗೆ ಕೊಡುವೆ,
ಆಡಲಿಕ್ಕೆ ಅರುಣನೆಂಬ ಹಕ್ಕಿಯೊಂದ ತಂದುಕೊಡುವೆ;
ಕಷ್ಟಕಾಲ ಬಂತು ಎಂದು ಬಳಗದೆಡೆಗೆ ಹೋಗಬೇಡ;
ಹಸಿದನೆಂದು ವಿಷದ ತಿನಿಸಿಗಾಗಿ ಬಾಯ ತೆರೆಯಬೇಡ
ಮಾನವೆನಗೆ ಮೊದಲೆ ಹೋಯ್ತು; ಬದುಕಿರುವೆನು ನಿನ್ನ ನಂಬಿ
ಆಕೆಯೆಡೆಗೆ ನಡೆಯೆ, ಜೀವ ಬಿಡುವೆ"ನೆಂದು ರೋದಿಸಿದಳು.
ತಂಗಿಯೂರ ಗಲಭೆಯಲ್ಲಿ ಇವಳ ಕೂಗು ಕೇಳ್ವುದೆಲ್ಲಿ?
ಅಡವಿಯಲ್ಲಿ ಕೂಗಿದಂತೆ ಬಡವೆ ಮೊರೆಯು ವಿಫಲವಾಯ್ತು.

ಹಾವ ಹೆಡೆಯ ನೆಳಲ ನಂಬಿ ಭೇಕವೋಡುವಂತೆ, ಬಳಲಿ
ಠಾವ ಬಯಸಿ ನೀಚೆಯುವಳ ಭವನದೆಡೆಗೆ ಓಡಿತೊಡನೆ.

ಒಡನೆ ಆಕೆ ಎತ್ತಿಕೊಂಡು ವೈರಿಯೆದೆಯ ಕೆಂಡದೊಂದು
ತುಂಡನಿದನು ಕೆಡಿಸದಿರಲು ಎನ್ನ ಕುಲವ ಉರಿಸದಿರದು
ಎಂದು ಮನದಿ ನೆನೆದು "ಬಳಲಿ ಬಂದೆ ನುಗುವೆ; ಜಲಧಿಯಲ್ಲಿ
ಮಿಂದು ತಣಿಯೊ; ಉಂಡುತಿಂದು ದೀರ್ಘನಿದ್ರೆಗೆಯ್ಯೊ ಯೆನುತ
ಕವಡು ಮನದ ಮಮತೆದೋರಿ ತನ್ನ ಮಗನ, ಶಶಿಯ, ಶುಭಕೆ,
ಹಣ್ಣಡಕೆಯ ಸುಳಿದು ಮಡುವಿಗೆಸೆವ ತೆರದಿ, ತಲೆಗೆ ಸುಳಿದು
ಎಳೆಗರುಳನು ಜಲಧಿಗೊಯ್ಯುತಿರಲು, ಬಡವೆ ಬೀಳದಿಹಳೆ?
ಜಲಧಿಯಲೆಯ ಹಾಸಿಗೆಯಲಿ ಪತಿಯ ಸೇರಿ ಕುಳಿತ ಲಕ್ಷ್ಮಿ-
ಗಿದನು ಕಂಡು ದುಃಖವಾಯ್ತು, ದೀನಬಂಧುಗೆಚ್ಚರಾಯ್ತು;
ಸತ್ಯಕಾಗಿ ಮರುಗುವವರ ಲೋಕದಲ್ಲಿ ತೊರೆವರುಂಟೆ?
ರಾಮಗವನ ರಾಜ್ಯವಿಲ್ಲ, ಬಂಧುಬಳಗವಿಲ್ಲ ಕಾಡ-
ಸೇರಿ ತಂದೆ-ಮಾತ ಸಲಿಸುವಲ್ಲಿ, ಕಳೆದುಕೊಂಡ ಸತಿಯ
ತನಗೆ ಪಡೆಯೆ ಬನ್ನಿರೆಂದು ಕಪಿಗಳನ್ನು ಕರೆದುದುಂಟೆ?
ಅರಸಿಕೈಕೆಗವಳ ಮಗನೆ ಮುನಿಯುವಂತೆ ಗೆಯ್ವರಾರು?
ಅಂತೆ ಬಡವು ತಾಯಿಮಕ್ಕಳವರ ಸುಡುವ ನೀಚೆಯಿವಳ
ಮತ್ಸರಾಗ್ನಿಯುರಿಯೆ ತನ್ನ ಅಳಿಯ ಮಗಳ ಮಮತೆಯೊಸರ
ಬತ್ತಿಸಿತ್ತು, ಕರುಣ ರಸಕೆ ಕಣವ ಮಾಡಿ ಹಾರಿಸಿತ್ತು;
ಅದನು ಬಡವೆ ಮರುಕದುಸಿರು ಸೆಳೆಯೆ ತಣಿದು ಕರಗಿಬಿತ್ತು;
ಮತ್ಸರಾಗ್ನಿಯುರಿಯು ನಂದಿಹೋಯ್ತು; ಒಡಲ ಬೇಗೆ ತಣಿದು
ಹೋಯ್ತು; ಮೂರ್ಛೆಗೊಂಡು ಧರೆಗೆ ಬಿದ್ದ ತಾಯಿ ಎದ್ದಳಾಗ
ದೀನರಲ್ಲಿ ಹರಿಯ ಸಿರಿಯ ಕರುಣೆಯೆಷ್ಟೊ, ಕರುಣೆಗಿರುವ
ಮಹಿಮೆಯೆಷ್ಟೊ ನಿದ್ದೆತಿಳಿದು ಏಳ್ವಳಂತೆ ಎದ್ದುನೋಡೆ
ತಡಿಯೊಳಲ್ಲಿ ಅಲೆಗಳೆರಡು ತೊಟ್ಟುಕಡಿದ ಕಮಲವೊಂದ
ತನ್ನ ಬಳಿಗೆ ಎಸೆವುದೇನೊ! ನೀಚೆಯೊಡತಿ ಗೆಯ್ಮೆ ಕಂಡು
ಒಡಬಸೆದೆಯೆ ನೆಲೆಯಬಿಟ್ಟು ತಡಿಗೆ ಹರಿದು ಬರುವುದೇನೊ!
ತಂಗಿಯಾಳ್ಗಳೆರಡು ತಮ್ಮ ಅರಸಿಗೆಯ್ದ ತಪ್ಪ ತೊಡೆಯೆ
ಜೀವರತ್ನವೊಂದ ತರುವುದೇನೊ? ಎನಲು ತನ್ನ ಶಿಶುವ
ಹೊಸಬರಿಬ್ಬರಾರೊ ಬಳಿಗೆ ತರುವುದನ್ನು ಕಂಡಳೊಡನೆ

ಶೋಕದಿಂದಲೊಣಗಿ ಹೋದ ಹರ್ಷವಾರಿ ಎದೆಯ ತುಂಬಿ
ಕಣ್ಣಿನಲ್ಲಿ ಸ್ತನಗಳಲ್ಲಿ ಪ್ರೇಮರಸದ ಒರತೆಯಾಯ್ತು.
ಕಮಲದೆಸಳ ತುಟಿಯು ಬಿರಿಯೆ, ಜಲಜಸಖನ ಹಿಡಿದುಕೊಳಲು
ಕರೆದಳಿಂತು "ಎನ್ನ ಕೊರಳ ಮಣಿಯೆ ಬಾರೊ ಎನ್ನ ಕೈಯ
ಸೊಡರೆ ಬಾರೊ, ಮರುಕವೆಂಬ ಮಬ್ಬಿನಿಂದ ಕುರುಡುಗೊಂಡ
ಹೃದಯಕೊಮ್ಮೆ ಬೆಳಕನೀಯೊ" ಎಂದು ಕರೆದು ಪಿಡಿದು ಎತ್ತಿ
ಮುತ್ತನಿತ್ತು ಕರೆದುತಂದ ಹೊಸಬರಿಬ್ಬರೆಡೆಗೆ ಹರಿದು
"ಹರಿಯ ಸಿರಿಯ ರೂಪಿನವರೆ! ಹಿರಿಯಪುಣ್ಯ ಪೊಂದಿದವರೆ!
ಫಣಿಯ ಶಿರವ ತುಳಿದು ಹೆಡೆಯ ಮಣಿಯ ಕೀಳುವಂತೆ; ಎನ್ನ
ದುರುಳೆ ತಂಗಿಕೈಯ ತಡೆದು ಜೀವರತುನನಿದನು ಭಿಕ್ಷೆ-
ಮೀಯಲೆನಗೆ ತಂದುದೆಂತು? ಪಂಚಮುಖನ ಗಂಟಲೊತ್ತಿ
ಆನೆಮರಿಯ ತರುವ ಪೆರದಿ ಎನ್ನ ಮರಿಯ ತಂದಿರೆಂತು?
ಕುಲದ ಕುಡಿಯ ಬೆಳಸೆ ಕರುಣಜಲವ ನೆರೆದರಾರು ನೀವು?
ಎನ್ನ ಜೀವ ಕಾಯ್ದುದಕ್ಕೆ ಬದಲಿಗೇನ ಕೊಡಲಿ ನಿಮಗೆ?
ಭಾಗ್ಯದೇವದೇವಿಯರಿರ! ಕಾಲಹಿಡಿದೆ ಋಣವ ಕಳೆವೆ"
ಎಂದು ಅಡಿಗೆ ಬಾಗುತಿರುವ ಬಡವೆಯನ್ನು ಪಿಡಿದು ಎತ್ತಿ
"ಅಮ್ಮ, ತಾಯೆ! ಬಾಗಬೇಡ ಪಾಪಕೆಮ್ಮ ದೂಡಬೇಡ;
ಪಡುವಣೊಡತಿಗಳಿಯ ಮಗಳು ಎನಿಸಿಕೊಂಡ ಪಾಪ ಸಾಕು
ನಿಮಗೆ ನಾವು ಅಳಿಯ ಮಗಳೆ; ಕಾವುದೆಮ್ಮ ಕಜ್ಜವಮ್ಮ
ಬಡವು ಶಿಶುವಿಗೆಡರ ಬಗೆದ ದುರುಳೆಯವಳ ಗಣಿಪರಲ್ಲ
ಕೈಯ್ಯ ತಡೆದು ನಿನ್ನ ಮಗುವ ತಂದೆವಾವು ತಾಯೆ ಹರಸು.
ಮಗನ ಕೇಡ ನೆನೆದು ಪಡುವ ಮರುಕವನ್ನು ಮರೆದು ಮನೆಗೆ
ತೆರಳು ನೀನು; ಆದರಮ್ಮ ಒಡನೆ ಮಗುವನೊಯ್ವೆಯೆಂತೊ?
ತೇಜವಿಲ್ಲ, ಬಳಲಿ ಹೋದ; ನಾಳೆ ಬೆಳಗು ಮೊದಲೆ ಬಹನು;
ಈಗಲೆನ್ನ ನಾಭಿಕಮಲದೆಸಳ ತೊಟ್ಟಿಲಲ್ಲಿಯೊರಗ
ಲೆ"ನುತ ಹರಿಯು ನುಡಿಯೆ, ಬಡವೆ ತನ್ನ ಮನದೆ ನೆನೆದಳೇನೊ
ಅಣ್ಣನನ್ನು ಕರೆಯಹೋದ ಭರತಗಾದ ಬವಣೆಯಾಯ್ತು;
ಇವಳ ಕಾಲು ಕದಲಲಿಲ್ಲ, ಕಣ್ಣರೆಪ್ಪೆ ಮುಚ್ಚಲಿಲ್ಲ,
ಪುತ್ರಮೋಹವವಳ ಬಾಯ ತಿರುಗಿ ತೆರೆದು ನುಡಿಯಿಸಿತ್ತು

ಬಂಧುಗಳಿರ! ಮಗುವು ನಿಮ್ಮಲಿರುವುದಕ್ಕೆ ಚಿಂತೆಯಿಲ್ಲ.
ಜಲದ ನೆಲದ ಭೇದಗಳನು ಮತ್ಸ್ಯ ತಿಳಿಯದಿರುವುದೇನು?
ನೀಚೆಯೆಡೆಗೆ ಮಗುವು ಸೇರಿ ಮರುಗಿದಂತೆ ನಿಮ್ಮ ಸೇರಿ
ಮರುಗಬೇಕೆ, ನೆನೆಯಬೇಕೆ? ಆದರೊಂದು ಮನದಲಿಹುದು
ಕರೆದರೆಡೆಗೆ ಓಡುತಿರುವ ತುಂಟನಿವನು, ತೆರೆದ ನಿಧಿಯು;
ಸಿಕ್ಕಿದವರು ಕೊಂಡುನಡೆಯಲಿನ್ನ ಮಣಿಯ ಕಾವುದೆಂತು?"
ಎನಲು ಹರಿಸಿರಿಯರು "ತಾಯೆ! ನಿನಗೆ ಇದರ ಚಿಂತೆ ಬೇಡ
ಚಿಂತೆಗೊಳಲು ಪಡೆಯಲಿಲ್ಲ; ಪಡೆವುದಲ್ಲ ತಾಯಿಮಗುವ-
ತನಗದೆಂದು, ಲೋಕಹಿತಕೆ ಪಡೆವಳವಳು ಮರುಗಬೇಡ.
ನಿನ್ನ ಮಗುವು ಕರೆದರೆಡೆಗೆ ಕರವ ನೀಡಿ ಹರಿಯುತಿರಲಿ.
ಬಳಲಿದಲ್ಲಿ ಬಲವನೀಯೆ, ತೇಜಗೆಡಲು ತೇಜವೀಯೆ.
ಸತತವದರ ಬೆನ್ನ ಹಿಂದೆ ಕಾದುಕೊಂಡು ಇರುವೆವಾವು.
ಲೋಕಸೇವೆಗಾಗಿ ಸುಳಿವ ಮಗುವ ಕಂಡು ಸುಖಿಸು ತಾಯೆ!
ಇನ್ನು ಬಳಿಯೊಳಿದ್ದೆ ಸುಖಿಸುವಾಸೆಯಿದ್ದರಿದನು ಕೇಳು;
ದಿನದ ಮೊದಲ ಗಳಿಗೆಯಲ್ಲಿ ಹಸುಳೆಯಾಗಿ ತೊಡೆಗೆ ಬಹನು.
ಎತ್ತಿಕೊಂಡು ಮುತ್ತನಿತ್ತು, ಹರಸಿಯವನ ಕಳುಹು ತಾಯೆ!
ಕುಮುದಬಂಧು ಬೆಳಕನಿತ್ತು ನಿನ್ನ ಜೊತೆಗೆ ಬರುವನೀಗ"
ಎಂದು ತಾಯ ಮೋಹತಮವ ಕಳೆದು ಶಶಿಯ ಕೂಡಿಕಳುಹೆ
ದುರುಳೆ ತಂಗಿ ಹೆತ್ತ ಮಗನೆನುತ್ತಲವನ ತಿಳಿಯಲಿಲ್ಲ.
ಮಗನೆ! ಎನುತಲಪ್ಪಿಕೊಂಡು ಹರ್ಷದಿಂದ ನಗುನಗುತ್ತ
ಮೂಡಣೆಡೆಗೆ ಬಂದಳೊಡನೆ, ಅಮೃತಕಿರಣವರ್ಷದೊಡನೆ.
ಮನಪಲಡಗಿದುದನು ನುಡಿಯಲೆಂತೊ ಬಯಲಿ
ಗೆಳೆದುದಾಯ್ತು
ಬಡವರೊಡವೆ ದೊಡ್ಡದಲ್ಲ, ಹಿಡಿಗೆ ಸಿಲುಕದಿರುವ ವಸ್ತು-
ವೆಂಬುದೇನೊ ಸಹಜವಾದರೊಂದನಿಲ್ಲಿ ಬೇಡಿಕೊಳುವೆ
ಹಾರುವೊಂದು ಹನಿಯು ಎಂದು ದೂರವಾಡಲಾಗದದರೊ-
ಳಡಗಿಕೊಂಡ ಹೊಲವ ಹಸನುಗೆಯ್ಸು ತಂಪ ಕಾಣಬೇಕು.

---

## ಅಮ್ಮೆಂಬಳ ಶಂಕರನಾರಾಯಣ

### ೧ ಅರುಣ

ನಸುಗೆಂಪಿನ
ತುಸು ಹಳದಿಯ
ಸಮ್ಮಿಶ್ರಣದೆಸಕ
ಚೆಲುವಾಗಿರೆ,
ಹೊಳೆಯುತಲಿರೆ,
ಅದೆಯರುಣನ ಗಮಕ!
ಕೆಂಬರಲನು
ಅಂಬರದಲಿ
ತುಂಬಿದ ತೆರ ನೋಟ;
ಕುಂಕುಮ ರಸ-
ವಂಕಿತವಹ
ವರ ಪಾಟಲ ಮಕುಟ;
ಚೆಂದಳಿರನು
ನೆಯ್ದುದರನು
ತೊಟ್ಟಿಹ ಸುವಿಲಾಸ;
ಕೆವಿಮ್ಮಾಸೆಯ
ಹುಮ್ಮಸವನು
ಇಮ್ಮಡಿಸುವ ಹಾಸ;
ರಕ್ತಾಂಬರ-
ಸಕ್ತೋದರ-
ಕಿರಣದ ಪರಿಪಾಟಿ;
ಕೆಂದಳದಲಿ
ಬಿಗಿವಿಡಿದಿಹ
ಹವಳದ ಚೆಲು 'ಚಾಟಿ';

—ಇಂತೊಪ್ಪಿರೆ,
ಸಂತಸದಲಿ
ಮೂಡಣದಲಿಯರುಣ
ಮೂಡುತ, ದೆಸೆ
ಗೀಡಾಡಿದ—
ನವ ಕುಂಕುಮ ಕಿರಣ!

ಹಕ್ಕಿಯ ಕೊರ-
ಲಿಂಚರ ಹೊರ-
ಹೊರಡಿಸಿ, ಹಾಡುವನು.
ಮಕ್ಕಳ ಮಾ-
ತಾಡಿಸಿ, ತಾ-
ನುರೆ ತೊದಲಾಡುವನು.

ಸಿಂಗಾರದ
ತಂಗಾಳಿಯ
ತೀಡಿಸಿ, ಸುಯ್ಯುವನು.
ಕಿರುಮುಗುಳನು
ಅರಳಾಗಿಸಿ,
ನಗಿಸುತ, ನಗುತಿಹನು.

ನಿದ್ದೆಯ ಪರೆ
ಕೀಳುತಲರೆ-
ದೆರೆದಿಹ ಕಣ್ಣುಗಳ
ಬಿರಿದರಳಿಸಿ,
ಎಬ್ಬಿಸುವನು
ನಾಡಿನ ಜನರುಗಳ.

ಹೊಸ ಹುರುಪನು
ಹೊಸೆಯಿಸುವನು
ಬೀರುತ, ಚೈತನ್ಯ;

ಉಪಹಾಸದಿ
ಅಪಹರಿಸುವ
ಜಡತೆಯ ಮಾಲಿನ್ಯ.

'ಅಜ್ಞಾನದ
ಅಂಧತೆಯನು
ಭೇದಿಸಿ, ನೇಸರಿದೋ
ಬೆಳಕಿನ ಬೆಳೆ
ತಿಳಿವಿನ ಹೊಳೆ
ಹೊಮ್ಮಿಸಿ ಬರುವನಿದೋ!'

ಎಂಬಾ ನುಡಿ
ನಂಬಿಸಿಯುಡಿ-
ಯಿಡುವನು ಮುಂದರುಣ!
ಆ ನಿಮಿಷದಿ
ರವಿಯುದಿಸುತ,
ಸುರಿವನು ಸುಜ್ಞಾನ!!

## ೨ ವಿಧಿ

ಕವಿಯು ಬಾಳ
ತಿಳಿವಿನಾಳ,
ನಲವು — ಚೆಲುವು,
ಕಾವು — ನೋವು,
ಪೂರ್ಣದಳತೆ,
ಕುಂದುಕೊರತೆ,
ಅವನ ಕವನ-
ದಲ್ಲಿ ಚೆಲ್ಲಿ,
ಜನತೆಗಾಗಿ
ವಿಶದವಾಗಿ
ತಿಳಿಯದಿರುವುದೇ?
ಮನವ
ಸೆಳೆಯದಿರುವುದೇ?

ಚತುರ ಶಿಲ್ಪಿ
ಶಿಲೆಯನೊಪ್ಪಿ,
ಅದರ ಮೇಲೆ
ವಿವಿಧ ಲೀಲೆ
ತೋರುವಂತೆ,
ಬೀರುವಂತೆ,
ಕೊರೆದ, ಬರೆದ,
ವಿವಿಧವಾದ,
ಶಿಲ್ಪ ಮೂರ್ತಿ
ಅವಗೆ ಕೀರ್ತಿ
ತಾರದಿರುವುದೇ?
ಕಲೆಯ
ತೋರದಿರುವುದೇ?

ನೇಸರಿಳಿಕೆ
ಅಪರ ಜಲಕೆ
ಸಾಗಿ ಬೈಗು-
ಗೆಂಪದಡಗು-
ವಾಗ ರಜನಿ
ಅಂಜಿಯಂಜಿ,
ಬಳುಕಿ ಬಂದು,
ಬಳಸಿ ನಿಂದು,
ಮೋಹಪಾಶ-
ದಿಂದ ತಬ್ಬಿ,
ನಲಿಸದಿರುವಳೇ?
ಒಗೆಯು-
ನೊಲಿಸದಿರುವಳೇ?

ಕತ್ತಲಳಿಯೆ,
ಮತ್ತೆ ಜಗದೆ
ಅರುಣ ಕಿರಣ
ತೋರಿ, ಕಾಣ.
ಬರಲು, ಮುಂದು
ಕಮಲಬಂಧು
ಉದಿಸಿ ಬಂದು,
ಭುವನವನ್ನು
ಬೆಳಕುಕಡಲಿ-
ನಲ್ಲಿ ಷೇಲಿ-
ಸದೆಯೆ ಇರುವನೇ?
ಹರ್ಷಿ-
ಸದೆಯೆ ಬರುವನೇ?

ಮೂಡ ಬಾನಿ-
ನಂಚಿನಲ್ಲಿ,
ಉಷೆಯ್ಯು ನಿಶಿಯು
ತೆರೆಯು ತೆರೆದು,
ಕಣ್ಣ ಮಿಟುಕಿ,
ನೋಡಲಾಗಿ,
ಮುಗಿದ ಮುಗುಳು
ಬಿರಿದ ಅಲರು
ಆಗಿ, ಕಂಪ
ಬೀರಿ, ಸೊಂಪ
ಸುರಿಸದಿರುವುದೇ?
ಜೇನ
ಹರಿಸದಿರುವುದೇ?

ಆರು ಬೇಡ-
ನೆನಲು ಕೂಡ,
ಋತುಗಳಾರು
ಚಕ್ರದಂತೆ
ತಿರುಗಿ ತಿರುಗಿ,
ತಿರೆಯ ಮೇಲೆ
ವರ ವಸಂತ,
ಹೇಮಂತ,
ಮಳೆಯ ಕಾಲ,
ಬಿಸಿಲುಗಾಲ-
ವಾಗದಿರುವುದೇ?
ಸಮಯ
ಸಾಗದಿರುವುದೇ?

ಜಗದ ಜೀವ-
ಯಾತ್ರೆಯಲ್ಲಿ
ವಿಧಿಯದೃಷ್ಟ-
ವಾಗಿ ನಿಂದು,
ಕಾಣದಿರುವ
ತನ್ನ ಕೈಯ
ಸೂತ್ರದಿಂದ
ನಿಯತವಾಗಿ,
ನಿತ್ಯವಾಗಿ,
ಲೋಕವನ್ನು
ನಡೆಸದಿರುವುದೇ?
ಜಯವ
ಪಡೆಯದಿರುವುದೇ?

## ೩ ಹಿಮ ಸಮಾಧಿ

ಹೇಮಂತ ಋತು ಯೋಗಿ ಮೌನದಲಿ ಘನ-ಸಾಂದ್ರ
ಹಿಮ ಸಮಾಧಿ ಸ್ಥಿತಿಯೊಳೊಪ್ಪಿಹನು; ನಿಶ್ಚಿಂತ
ನಿಶ್ಚಲ ಧ್ಯಾನ ಸನ್ಮುದ್ರೆಯಲಿ ತಪವಾಂತ
ಯತಿಯ ರೀತಿಯನೋತು ನಿಂತಿಹನು! ಹಿಮ ರುಂದ್ರ
ಭಾವದಲಿ ಸಕಲ ಭೂಮಿ-ವ್ಯೋಮ ಕರಗಿಹುದು.
ಬೂದು ಬಣ್ಣದ ಲೀಲೆಯಲಿ ವ್ಯಾಪ್ತವಾಗಿರುವ
ಸಾಮಸ್ತ್ಯ ಸೂತ್ರದಲಿ ನಿಸ್ಸೂತವೀ ವಿಶ್ವ!
ಪ್ರಾಣಿಸಂತತಿಯೆಲ್ಲ ಕುಳಿರ ಕಡಲಿನೊಳಾಳ್ದು,
"ಭೂತ"ದಾವೇಶವಾಂತಂತೆ "ಗಡಗಡ" ನಡುಗಿ,
ಬೆಕ್ಕಸಂ ಬಡುತಿಹುದು. ಇದನಾವುದನು ಕೂಡ
ಗಣಿಸದಿಹ ಹಿಮಪುರುಷನಿರವಿನದ್ಭುತ ನೋಡ—
ಅವ್ಯಕ್ತ ಶಕ್ತಿಯಿಂ ವ್ಯೋಮವಕ್ಷವನುಡುಗಿ,
ಗಿರಿ ಶೃಂಗ ಕಾಂತಾರ ಭೂಮಿಗಳನಾವರಿಸಿ,
ನಿಂತಿಹನು ವರ ವಿರಾಡಾಕಾರವನು ವಹಿಸಿ!

---

## ಪಿ. ವೆಂಕಟರಮಣಾಚಾರ್ಯ

### ೧ ಏನನೆಣಿಸುತಲಿರುವೆ, ಬಾಲೆ?

ಪುಷ್ಪ-ಮುಷ್ಟಿಗೆ ಗಲ್ಲವಿತ್ತು,
ತೋಳನೂರುತೆ ತೊಡೆಯ ಮೇಲೆ,
ದೃಷ್ಟಿಯನು ಶೂನ್ಯದಲಿ ನಟ್ಟು,
ಏನನೆಣಿಸುತಲಿರುವೆ, ಬಾಲೆ?
ಅಲಕ ಹಣೆಯಲಿ ಚಲಿಸುತಿಹುದು,
ಅದನು ನೀ ಮೇಲ್ ತಿದ್ದದಿರುವೆ;
ತಿಲಕ ಬೆವರಿಂದಳಿಸುತಿಹುದು,
ಅದನು ನೀ ಮೇಣ್ ತಿದ್ದದಿರುವೆ.

ಆವ ಚಿಂತೆಯ ಕಡಲತೆರೆಗಳು
ನಿನ್ನಯೆದೆತಡಿಗಡರುತಿಹವು?
ಆವ ಭವಿತವ್ಯತೆಯ ಭೀತಿಯ
ಕೀಟಗಳು ಮನ ಕೊರೆಯುತಿಹವು?
ನೀನು ಏಕಾಕಿತೆಯ ನೆರೆಯಲಿ,
ತೆರೆದ ಬಾಗಿಲ ಬಳಿಯೆ ಕುಳಿತು,
ಸಾವು ಮುಟ್ಟದ ನೋವಿನಂದದಿ
ಭಾರಜೀವನ ಹೊರೆಯುತಿಹೆಯೆ?

ಮುದ್ರಿಸಿದ ತುಟಿ, ಕೊಂಕು ಭ್ರುಕುಟಿಯು,
ಮುಗ್ಗಿದೆಸಳಿನ ತೆರದ ಪಲಕ;
ನೆರೆಯ ತಪ್ಪಿದ, ನೆಲವನಪ್ಪಿದ,
ಲತೆಯ ಹೋಲುವ ತನುವಿನೆಸಕ;

ಸಿಡಿಲು ಸುಟ್ಟಿಹ ಮರನು, ಸುಟ್ಟುರಿ
ಗಳುಕದಂದದೆ ನಿನ್ನ ಭಾವ!
ಮಡಿಲ ನಿರಿಗಳು ಮಿಡುಕದಂದದ
ನಿನ್ನ ಸುಯ್ಲಿನ ಶಾಂತಭಾವ!

*    *    *    *    *

ಅಳಿದ ಬಯಕೆಯ ಚಿತೆಯ ಮೇಲಿನ
ಕನಲುಕಿಡಿಯಂಗಾರ ನೀನು!
ಮುಳಿದ ಭಾಗ್ಯದ ಪ್ರತಿಹತಿಯ ಮನ-
ಕರಗಿಸುವ ಪ್ರತಿಮೂರ್ತಿ ನೀನು!

## ೨ ಕೊನೆಯ ಹಾಡು

ಕೊನೆಯ ಹಾಡ ಹಾಡುವಾಗ
ಮೌನ ಬಂದು ಮುಸುರದಿರಲಿ;
ಕೊನೆಯ ನೋಟ ನೋಡುವಾಗ
ಕಣ್ಣ ಬುಗ್ಗೆಯೊಸರದಿರಲಿ;
ಕೊನೆಯ ದನಿಯ ಕೇಳುವಾಗ
ಕಿವಿಯ ಗವಿಯು ಮುಚ್ಚದಿರಲಿ;
ಮನದ ಪುಲಿನ ವಕ್ಷವೊಡ್ಡಿ
ಕೊನೆಯ ತೆರೆಯ ಕರೆಯಲಿ!

ಹೃದಯವೊಂದು ವೀಣೆಯಾಗೆ,
ಪ್ರಾಣವೈದು ಬೆರಲ್ಗಳಾಗಿ,
ಭಾವವೆಂಬ ತಂತಿಗೆನಿತೊ
ತಾನವಿತ್ತು ಮಿಡಿಯಲಾಗಿ,
ಕೊನೆಯ ನುಡಿಯ ನುಡಿಸುತಿರಲು
ಎದ್ದ ಮತ್ತ-ಮಧುರ ನಾದ
ಗಗನದೊಳಗನಂತವಾಗಿ
ಮರಳಿ, ಮರಳಿ, ಮೊರೆಯಲಿ!

ಈ ದುರಂತ ಯಾತ್ರೆಯಲ್ಲಿ
ಎನಿತು ದೃಶ್ಯ ಕಂಡುದಿರಲಿ,
ಕಾಡಿನಲ್ಲೊ, ನಾಡಿನಲ್ಲೊ,
ರಸಗಳೆನಿತನುಂಡುದಿರಲಿ,
ಗಡಿಯ ನಾಡ ದಾಟುವಾಗ
ದಿಟ್ಟಿ ಹೊರಳಿ ಕಂಡ ನೋಟ—
ನೆನಹು ಅದರ ಚಿತ್ರವೊಂದ
ಮಾಸದಂತೆ ಬರೆಯಲಿ!

ಕುಂಜದೊಂದು ಮೂಲೆಯಲ್ಲಿ
ಗಂಧಹೀನ ಸುಮವಿದೊಂದು;—
ಮೊರೆದು ಭೃಂಗವೆರಗದಿರಲು
ಬಗೆಯೆ ನಾನು ಹದನನದನು;
ಹಗಲು ತಣಿಯುತಿರಲು, ತೊಟ್ಟು-
ಕಡಿದು ನೆಲಕೆ ಜಗುಳುವಾಗ
ತೊನೆಯವೆಲರ ಸುಯ್ಲದೊಂದೆ
ನುದಿಸುತಿಗಲಿ ಕಿವಿಯಲಿ!

ಮನೆಯ ಮೋಹ ಕರೆಯುತಿರಲಿ,
ಜನದ ನೇಹವೆರೆಯುತಿರಲಿ,
ಕಣ್ಣ ನೀರು ಯಮುನೆಯಾಗಿ
ನಿನ್ನ ಮುಂದೆ ಹರಿಯುತಿರಲಿ,
ಕೊನೆಯ ಬಾರಿ ಬೀಳುಗೊಂಡು
ತಿರುಗಿ ನೋಡಬೇಡ, ಯಾತ್ರಿ!
ಹಾಯಿಯೆತ್ತಿ ಹಾಯು ಮುಂದೆ—
ನಿನ್ನ ಪ್ರಾಣ-ತರಿಯಲಿ!

## ೩ ಕವಿ-ವಿಮರ್ಶಕ

ಅಚ್ಛ ನೀಲ ಯಮುನೆ ಅಲ್ಲಿ
ಹೆಚ್ಚಿ ಹರಿಯುತಿರುವುದು,
ನೆಚ್ಚಿನಿಂದ ರಾಜಹಂಸ-
ವಲ್ಲಿ ವಿಹರಿಸಿರುವುದು;
ತೀರದಲ್ಲಿ ಬಕನದೊಂದು
ಊರಿ ಕಾಲ, ಸುಯ್ದಿದೆ:
ನೀರಿನಾಳದಲ್ಲಿ ಮೀನು
ದೊರಕದೆಂದು ಬಯ್ದಿದೆ!
ರೊಚ್ಚೆಗುಂಡಿ ವಿಪುಲವಿಹುದು,
ಏತಕಿಲ್ಲಿ ತಳುಹುವೆ?
ಅನವಗಾಹ ಯಮುನೆಯಲ್ಲಿ
ಮೀನನೆಲ್ಲಿ ಹುಡುಕುವೆ?

*　　*　　*　　*　　*

ಮೂಡ ಬಾನಿನಲ್ಲಿ ರಾಗ-
ಲೇಖೆಯುದಯಗೊಳುತಿದೆ,
ಎದೆಯ ಮೀಟಿ, ಮೀಟಿ, ಪಿಕವು
ಗಾನರಸವ ಕರೆದಿದೆ;
ತಾಳೆಯೊಂದು ಮಡಲಿನೆಡೆಗೆ
ತನ್ನ ಮೆಯ್ಯ ತೂರುತೆ,
ಗೂಗೆಯೊಂದು ಕೂಗುತಿಹುದು
ಉಷೆಯ ಬರವ ದೂರುತೆ!
ಬೆಳಕು ಚುಚ್ಚದಿರುವ ಗುಹೆಗ-
ಳೆನಿತೊ ಜಗದೊಳುಳಿದಿವೆ—
ಅಲ್ಲಿ ನಿನ್ನ ತವರುಮನೆಯು
ಏತಕಿಲ್ಲಿ ತಳುಹುವೆ?

## ೪ ಸುಗ್ಗಿಯ ಹಾಡು

ಏಳಿರಿ, ಏಳಿರಿ, ಹಿರಿಯರೆ, ಕಿರಿಯರೆ,
ಸುಗ್ಗಿಯು ಬಂದಿಹ ಬಾಗಿಲಿಗೆ—
ಏಳಿರಿ, ಅಕ್ಕಂದಿರೆ, ಅಣ್ಣಂದಿರೆ,
ಸುಗ್ಗಿಯು ಬಂದಿಹ ಬಾಗಿಲಿಗೆ—
ಮೋಡಗಳೆಲ್ಲವು ಚದರಿದುವು;
ಮಂಜಿನ ಮುಸುಕುಗಳುದುರಿದುವು;
ಹೊಸ ಹುರುಪೆದ್ದಿದೆ ಜಗದೊಳಗೆ;
ಸುಗ್ಗಿಯು ಬಂದಿಹ ಬಾಗಿಲಿಗೆ!

ಮುಗಿಲರಮನೆಯಾ ಬಾಗಿಲ ತೆರೆದು,
ಸುಗ್ಗಿಯು ಬಂದಿಹ ಬಾಗಿಲಿಗೆ—
ಬುವಿಯಲಿ ತನ್ನಯ ಬೆಡಗನು ಮೆರೆದು
ನಮ್ಮಯ ಹೊಲಗಳ ಸೋಗಿಲಿಗೆ—
ತಣ್ಣನೆ ಗಾಳಿಯು ತೊನೆಯುವುದು;
ನನೆಗಳ ಕೊನೆಯಿದೊ ಮೊನೆಯುವುದು;
ಇನಿದನಿಯೇರಿದೆ ಕೋಗಿಲೆಗೆ;
ಸುಗ್ಗಿಯು ಬಂದಿಹ ಬಾಗಿಲಿಗೆ!

ರಾಜಸಮಾರೋಹವನೊಡಗೊಂಡು,
ಸುಗ್ಗಿಯು ಬಂದಿಹ ಬಾಗಿಲಿಗೆ—
ನಮ್ಮತಿಥಿಯನೆದುರ್ಗೊಳ್ಳುವ, ಬನ್ನಿ,
ವಿರತಿಯನೀಯಿರಿ ನೇಗಿಲಿಗೆ—
ವರ್ಷದೊಳೆಲ್ಲಾ ಗೇಯುವುದೆ?
ಬೆವರಿನ ತೊರೆಯಲಿ ತೋಯುವುದೆ?
ಹಾಡುವ ಬನ್ನಿರಿ, ಅರೆಗಳಿಗೆ—
ಸುಗ್ಗಿಯು ಬಂದಿಹ ಬಾಗಿಲಿಗೆ!

ಅಳಿಗಳ, ಗಿಳಿಗಳ, ಮೊರೆವಣಿಗೆಯಿದೆ:
ಸುಗ್ಗಿಯು ಬಂದಿಹ ಬಾಗಿಲಿಗೆ—
ಚಿಗುರಿನ, ಮುಗುಳಿನ, ಬಿರುದಾವಳಿಯಿದೆ,
ಹಾಡುವ ಬೆಸನವು ಕೋಗಿಲೆಗೆ—
ನಮ್ಮಯ ದನಿಗಳ ಬೆರೆಯಿಸುವ,
ಇಲ್ಲದ ತಾನವ ಮೊರೆಯಿಸುವ,
ಮುದವನು ತುಂಬುವ ಧರೆಯೊಳಗೆ:
ಸುಗ್ಗಿಯು ಬಂದಿಹ ಬಾಗಿಲಿಗೆ!

ಸುಖದುಃಖಗಳನು ಮರೆಯುವ ಬನ್ನಿ—
ಸುಗ್ಗಿಯು ಬಂದಿಹ ಬಾಗಿಲಿಗೆ—
ಅವನೆಣಿಸುವ ಸೂಳ್ ಮುತ್ತಿದೆಯೆನ್ನಿ:
ದಿನದಲಿ ಅರುವತ್ತೂ ಗಳಿಗೆ!
ಮರವೆಯಲಿರುವುದು ಆನಂದ;
ಸವಿಯಿರಿ ಮರವೆಯ ಮಕರಂದ!
ಮಾಡಿರಿ ಸುಖಸಾರದ ಸುಲಿಗೆ!
ಸುಗ್ಗಿಯು ಬಂದಿಹ ಬಾಗಿಲಿಗೆ!

ಬನ್ನಿರಿ, ಬನ್ನಿರಿ, ಮೆಟ್ಟಿಲನಿಳಿದು,
ಸುಗ್ಗಿಯು ಬಂದಿಹ ಬಾಗಿಲಿಗೆ—
ಹಳತನು ಮರೆಯಿರಿ, ಹೊಸತನು ತೆರೆಯಿರಿ,
ಸಿಕ್ಕಲಿ ಮನ ಕುಣಿತದ ಸೆಲೆಗೆ!
ಗೈಮೆಯ ಬೆವರಿನೊಳದ್ದಿದಿರಿ,
ಕುಣಿತದ ಬೆವರಿನೊಳದ್ದುವಿರಿ!
ಆನಂದದ ತೆರೆಯಲಿ ಮುಳುಗೆ,
ಸುಗ್ಗಿಯು ಬಂದಿಹ ಬಾಗಿಲಿಗೆ!

---

## ಕೆ. ಆರ್. ಕೃಷ್ಣ ರಾವ್

### ವಿರಹಿ ರಾಧೆ

ರಾಧೆಗಿಂದು ಬನಕೆ ಬಂದು
ಪ್ರೇಮಭ್ರಾಂತಳಾಗಿ ನಿಂದು
ಮಧುರ ಗಾನ ಹಾಡಿ ನಲಿಯೆ
ಹರುಷ ಹೆಚ್ಚಿತು,
ಬನದ ಇನಿಯನನ್ನು ಕಾಂಬ—
ಆಶೆ ಹುಟ್ಟಿತು.

ಚೆಲುವೆ ಬನದಿ ಸುತ್ತು ಬಂದು
ಅಲರುಗಳನು ಆಯ್ದು ತಂದು
ಮರದ ನೆಳಲಿನಲ್ಲಿ ನಿಂದು
ಮಾಲೆ ನೆಯ್ದಳು;
ವೇಣುಗೋಪಗದನು ನೀಡೆ
ಕಾದು ಕುಳಿತಳು.

ಕೃಷ್ಣನಲ್ಲಿ ಬಾರದಿರಲು—
ರಾಧೆಯಾಶೆ ಚಿಗುರದಿರಲು
ಮಿಂಚಿನಂತೆ ಮಾಯವಾಗಿ
ಮುಂದೆ ನಡೆದಳು;
ಬನದೊಳೆಲ್ಲ ಅವನ ಹುಡುಕಿ—
ಕಾಣದಾದಳು.

ಚಿಗರಿಯಂತೆ ಚಿಗಿದುಕೊಂಡು
ಬುಗರಿಯಂತೆ ತಿರುಗಿಕೊಂಡು
ರನ್ನೆ ಬನವ ತೊರೆದು ಯಮುನೆ-

ದಡಕೆ ಬಂದಳು;
ಅಲ್ಲಿಯವನ ಹುಡುಕಿ ಕೊನೆಗೆ
ಕಾಣದಾದಳು.

ಗಾನಮಾಡಿ ಕರೆವೆನೆಂದು—
ಗಾನ ಕೇಳಿ ಬರುವನೆಂದು
ರಾಧೆ ಯಮುನೆದಡದಿ ಸರಸ
ವಾಗಿ ಹಾಡಲು
ಹಾಡಿ-ಹಾಡಿ ಸೋತು ಹೋಗಿ—
ಮನದಿ ನೊಂದಳು.

ಇನಿಯನನ್ನು ಧ್ಯಾನಿಸುತ್ತ
ಇನಿಯಗಾಗಿ ಚಿಂತಿಸುತ್ತ
ಯಮುನೆಯೊಬ್ಬಳನ್ನು ಬಿಟ್ಟು—
ಹೊರಟು ಬಂದಳು;
ರಾಧೆ ಇಂದು ಬನಕೆ ಬಂದು
ವಿರಹಿಯಾದಳು.

ಕೊಳಲ ಗಾನ ಕೇಳುತಿದ್ದ—
ನಲ್ಲನೊಡನೆ ನಲಿಯುತಿದ್ದ
ಬನದ ರಾಣಿ ಬನದ ನಡುವೆ
ವಿರಹ ತಾಳ್ದಳು;
ಪ್ರೇಮಭ್ರಾಂತಳಾದ ರಾಧೆ—
ಮರುಕಗೊಂಡಳು.

ಮಂಜಿನಂತೆ ಅಶ್ರುಬಿಂದು
ಸಂಜೆ ವೇಳೆ ಬೀಳುತಿರಲು
ಸೆರಗಿನಿಂದ ಒರಸಿ ರಾಧೆ
ಬನದೊಳಿದ್ದಳು;
ವಿರಹದಿಂದ ಬೆಂದ ಮನವ—
ಶಮಿಸದಾದಳು.

ಗರಿಯ ಹರಡಿ ಬಣ್ಣ ತೋರಿ—
ಹುರುಷದಿಂದ ನಗುವ ಬೀರಿ
ಕುಣಿಯುತಿದ್ದ ನವಿಲು ಹಿಂಡು
ಕುಣಿಯದಾಯಿತು.
ಮೇಲಕಿದ್ದ ಕೋಂಕುಕೊರಳು
ನೆಲಕೆ ಬಾಗಿತು.

ಹಾಡುತಿದ್ದ ಖಗಗಳೆಲ್ಲ
ಹಾಡ ನಿಲಿಸಿ ಬನದೊಳಿಂದು
ಮೌನವ್ರತವ ತಾಳಿದಂತೆ
ತೋರುತಿದ್ದಿತು;
ವಿರಹಿ ರಾಧೆಯೊಡನೆ ಮರುಗು
ವಂತೆ ಕಂಡಿತು.

---

## ಕೆ. ಶಿವರಾಮ ಕಾರಂತ

### ೧ ಸೋಮಿ

ಕಾಡೀಗಿ ಬಣ್ಣದ ಹುಡುಗಿಯು ಅವಳು.

ಕಾಡಿಗಿ ಬಣ್ಣದ ಹುಡುಗಿಯು ಅವಳು
ಕಾಡಿನ ಬದೀಲಿ ಬೆಳೆದು ಬಂದವಳು
ಕೂಸಾಳು ಗುರ್ವ‍ಗೆ ಒಬ್ಬಳೆ ಮಗಳು
ತುಂಬಿಯು ಕಣ್ಣಿಗೆ ಗುಂಗುರು ಹೆರಳು
ಕಾಡೀಗಿ ಬಣ್ಣದ ಹುಡುಗಿಯು ಅವಳು.

ಆಡಿನ ಮರಿಯಂಥ ಜಿಗಿನೆಗೆದಾಟ
ನೀಲದ ಗೊಂಬಿಯು, ಚೆಲ್ವಿನ ಮಾಟ
ತೇಲುತವಾಲುತ ಹೋಗುವ ನೋಟ
ಬರ್ಮನ ಇಚ್ಚಿಗು ಮೀರಿದ ದೃಷ್ಟ
ಕಾಡೀಗಿ ಬಣ್ಣದ ಹುಡುಗಿಯು ಅವಳು.

ಕುಲಕೇನು ಕಮ್ಮಿ ಈ ನಮ್ಮ ಸೋಮಿ
ಗುರ್ವಣ್ಣ ಅಪ್ಪ, ಅಬ್ಬೆಯು ತಿಮ್ಮಿ.
ಮಾನಮರ್ವಾದಿಗೆ ಪಿರಾಣ ಕಮ್ಮಿ
ಧನೀರು 'ಹೂಂ' ಎಂದ್ರೆ ಸೆಗ್ವಾರು ಚಿಮ್ಮಿ.
ಕಾಡೀಗಿ ಬಣ್ಣದ ಹುಡುಗಿಯು ಅವಳು.

ಬನ್ನೇರು ಗುಡ್ಡೆಯ ಕೊಪ್ಪದಿ ಗುರ್ವಣ್ಣ
ತನ್ನಪ್ಪ ಮುತ್ತಜ್ಜ ಹುಟ್ಟಿದ ಗುಡೀಲೆ
ಚೆನ್ನಿತಿಮ್ಮಕ್ಕೆಯ ಕೂಡಿ ಬಾಳ್ವೆಯ ಮಾಡಿ
ಕೂಡೇಲ ದೇವರಿಗೊಪ್ಪುವಂತಿದ್ದ
ಚೊಚಲು ಹಸುಗೂಸು ಸೋಮಿಗೆ ಸಂದಿತು.

ಐದು ಕೆಡ್ವಾಸವು ಕಣ್ಮುಚ್ಚಿ ತೆರೆವಾಗ
ನೆಚ್ಚಿದ ಹೊಲ್ತಿಯು ಪಂಜುರ್ಲಿ ಕೊಂಡೋಯ್ತು.
ಮುಗಿತಂದು ಸೋಮಿಗೆ ಹೆತ್ತಬ್ಬೆಯುಣವೂ

ಸೋಮಿಾ ಸೋಮಿಾ
ಅಳಬೇಡ ಚಿನ್ನಿ!
ಇನ್ನೊಂದು ಮದುವ್ಯಾಗೆ
ನಿನಗಾಗಿ ಹೊನ್ನಿ!

## ೨ 'ಮುಕ್ತದ್ವಾರ'ದಿಂದ

### I

ಎಲ್ಲೆಲ್ಲು ಏನಿಲ್ಲ ತಮವೆಂಬ ಹೆಬ್ಬಾವು
ಎಲ್ಲವನು ತಿಂದಂತೆ, ತಿಂದು ತೇಗುತೆ ತಾನು
ಜಡವಾಗಿ ಜೀವಕಳೆ ತೊರೆದು ಮಲಗಿರುವ
ಮಬ್ಬಿನಂದದಿ ಕಾಂಬ ಘೋರವೇನು!

ಇದ್ದುದೇ ಏನಿಲ್ಲ, ಬಂದಿಹುದು ಏನಿಲ್ಲ,
ತಿಂದವರು ಯಾರಿಲ್ಲ, ಎಲ್ಲ ಬರಿಭ್ರಮೆಯೆಲ್ಲ,
ಭ್ರಮೆಯೆಂಬುದೂ ಇಲ್ಲ! ಇಲ್ಲವೆಂಬುದೆ ಒಂದು
ಕನಸಾಗಿ ತನ್ನನ್ನೆ ಕಾಣುತಿಹುದು.

ಕಾಳಕತ್ತಲೆ ತಾನು ಎತ್ತೆತ್ತಲೂ ಹರಡಿ
ನೆಲವಾಗಿ ಮಲಗಿದ್ದು, ಗಿಡವಾಗಿ ಚಿಗುರಿದ್ದು
ನೆಲದೊಳಗೆ ಬೇರಿಟ್ಟು ಗಗನವನು ಮುತ್ತಿಟ್ಟು
ಎಡೆಯೆಲ್ಲ ನುಗ್ಗುತಲಿ ತಾನೆ ತಾನು.

ಇರುಳೆಂದರೆಲ್ಲುಂಟು? ಬೆಳಕಿದ್ದರಿರುಳಲ್ತೆ?
ಬೆಳಕ ಬಲ್ಲವರಾರು? ಇರುಳು ಎಂಬುದು ಏಕೆ?

ತನುವೆಂಬುದು ಏಕೆ? ಇಲ್ಲವೆಂಬುದು ಏಕೆ?
ಇದ್ದುದರ ಅರಿವನ್ನೆ ಬಲ್ಲರಾರು?

ನಾನಿಲ್ಲ, ನೀನಿಲ್ಲ; ಇನ್ನಿಲ್ಲ, ಮುನ್ನಿಲ್ಲ.
ನಿಲ್ಲುತಿರೆ ನೆಲವಿಲ್ಲ, ನಿಲ್ಲಿಸುವ ಜೀವಿಲ್ಲ;
ಉಂಟೆನುವ ಸುಳಿವಿಲ್ಲ, ಸೃಷ್ಟಿಕರ್ತನೆ ಇಲ್ಲ;
ಇಲ್ಲವೆನುವ ಸೊಲ್ಲ ಇಡುವನಿಲ್ಲ.

## II

ಬೆಳಕೊಂದು ಜನಿಸುತಿದೆ. ಬೆಳಕುಗೊಳ್ಳುವ ವಸ್ತು
ಬೆಳಕ ಕಾಣುವ ಕಣ್ಣು, ಬೆಳಕಿನೊಂದಿಗೆ ಹುಟ್ಟಿ
ಚೆಲುವಾಂತ ಚಿತ್ರವನು, ನಲವಾಂತ ಜೀವವನು
ಮಿಗುವಂತೆ, ಉಲಿವಂತೆ ತೋರುತಿಹವು.

ಅಂಬರದ ಅಂಚಿನಲಿ ಶಿಶುವೊಂದು ಮೊಳೆಯುತಿದೆ.
ನಾದ ನೋಟಗಳೆಲ್ಲ ಅಲ್ಲೆಲ್ಲೊ ಏಳುತಿವೆ!
ಕತ್ತಲೆಯು, ಶೂನ್ಯತೆಯು, ಇಲ್ಲೆಂಬುದರ ಪರೆಯು
ಕಿತ್ತೊಗೆವ ಬಲು ಸಿರಿಯ ಸಾಸದುದಯ.

ದೆಸೆಯ ಹೊಂಬಣ್ಣದಲಿ ಜ್ವಲಿಸಿ ಮಿರುಗುತಲಿಹುದು
ಉಷೆಯ ಸೀರೆಯ ಹೊಳಪು, ನೆರಳಾಗಿ ಬಿದ್ದಿರುವ
ನೆಲದ ಅಂಚನು ಬೆಳಗಿ, ಇಲ್ಲದನು ಉಂಟೆನಲು
ನಗುವೊಂದು ಮೊಳಗುತಿದೆ ಭರದಿ ಉಕ್ಕಿ.

ಚಿನ್ನದಂಬರವೊಡೆದು, ಚೆನ್ನ ಸೊಗಸಿನ ಅಂಡ
ತನ್ನೊಳಗೆ ತಾ ಹುಟ್ಟಿ, ಕಂಗಳಿಗೆ ಕಾಂಬಂತೆ
ನೆಲವಾಗಿ, ನೀರಾಗಿ, ಕನಸಾಗಿ, ನೆನಸಾಗಿ
ಜೀವಭಾವದ ಸಕಲ ರೂಪವಾಗಿ.

## III

ಎಲ್ಲೆಲ್ಲು ಪರಮಾತ್ಮನಾಟ ನೋಡು
ಎಲ್ಲೆಲ್ಲು ಪರಮಾತ್ಮ ನೋಟ ನೋಡು
ಎಲ್ಲೆಲ್ಲು ಆನಂದ ಪುಳಕಾಟ ನೋಡು.

ಇಂದ್ರನಿವ ನಭದಿಂದ ಕರೆಯುವನು ಮಳೆಗಳನು
ಚಂದಿರನು ಓಷಧಿಯ ಸಂಸಾರ ಬೆಳೆಯುವನು.
ಪೂಷ, ಮಿತ್ರರೆಲ್ಲ ಜಗದ ಸೊಗಸನು ಬಯಸಿ
ಶ್ರಮಿಸಿ ದಣಿಯುತಲಿಹರು ಬಿಡುವ ಮರೆತು.

ಉದಿಸಿ ಗಗನದ ತುತ್ತ ತುದಿಯನ್ನ ಸೇರುತಲಿ
ಸಂಜೆಯಲಿ ಮುಳುಗುವನು ರವಿರಾಯ ಚೆಲುವಿನಲಿ.
ಇಳೆಯ ಹುಟ್ಟಿಸೆ ಬ್ರಹ್ಮ, ಕಾಯ್ದು ಮೆರೆಯಿಸೆ ವಿಷ್ಣು,
ಅಳಿಗಾಲವನು ತರಲು ಹರನು ಇಹರು.

ಕಾಂಬ ಕಣ್ಣಿಗೆ ಇದುವೆ ಸೋಜಿಗದ ನಾಟಕವು;
ನಾ ಬೇರೆ ಅದು ಬೇರೆ ಗೈದು ತೋರುವ ಮಾಯೆ!
ಪರಬ್ರಹ್ಮನೆಂಬೊಂದು ದೇದೀಪ್ಯ ಜ್ಯೋತಿಯಿದು,
ಸಾಗರದ ಪ್ರತಿಫಲಿಪ ಬಿಂಬಕೋಟಿ.

ಅವನೊಳಗೆ ಸಾವಿದ್ದು, ಅವನಿಂದೆ ಬದುಕಿದ್ದು
ಅವನೆ ನಮ್ಮಯ ನೆಲೆಯ ಎಂಬುದನೆ ಮರೆಯುತಲಿ
ಇಲ್ಲದಿಹ ಕನಸೊಂದ ಕಣ್ಮುಂದೆ ನಿಲ್ಲಿಸುತೆ
ನಾಟಿರದ ಬೇನೆಯೊಳು ಬಳಲಲೇಕೆ?

## IV

ಶಾಂತ ತಪಸಿನ ಯುಗವು ಸರಿದು ಮೂಲೆಯ ಸೇರಿ
ಹೊನ್ನು ಮಣ್ಣಿನ ಯುಗವು ಒತ್ತಿ ಹರಿಯುತಲಿಹುದು;
ಜೀವನದ ನೌಕೆಯನು ಈ ಭವದ ಕಡಲೊಳಗೆ
ಚೆನ್ನ ದಾಟಿಸ ಬಲ್ಲ ನರನ ಕಾಣೆ.

ಅಣು ರೇಣು ತೃಣ ಕಾಷ್ಠದೊಳು ತನ್ನ ಬಿಂಬವನು
ಅರಸಿ, ತನ್ನಯ ಪೂಜೆ ಜಗದ ಸೇವೆಯು ಎಂದು
ಮೆರೆದ ತಾಪಸರೆಲ್ಲ, ಸರಿದು ಹೋದರು ಹಿಂದೆ,
ತಿಳಿವು ಚೆಲುವುಗಳೆಲ್ಲ ಮಾಯವಿಂದು.

ಮನದೊಳಗೆ ಮಾರ್ದನಿಯನೀವ ಸಾಮದ ಗಾನ
ಒಡಲ ಬಾಯಾರಿಕೆಯ, ತಣಿಪ ತತ್ವಜ್ಞಾನ
ಸಕಲವೂ ಮುಳುಗಿದುವು — ರಣದುಂಧುಬಿಯ ನಿನದ,
ಎಸೆವ ಕೂರಂಬುಗಳ ಠೇಂಕಾರದಿ.

ಕೃತ ತ್ರೇತಗಳು ಸರಿದು ದ್ವಾಪರವು ಮುರಿಯುತಿದೆ,
ಕುರುಭೂಮಿಯೊಳು ಇಂದು ದ್ವಾಪರನ ಮಸಣವಿದೆ.
ಭುಗಿಭುಗಿಲು ಭುಗಿಲೆಂದು ದ್ವೇಷಕ್ರೌರ್ಯಗಳೆಲ್ಲ
ನರನ ಸದ್ಬುದ್ಧಿಯನೆ ಅರೆಯುತಿಹವು.

ನೋಡಲ್ಲಿ — ಕುರುಸೇನೆ! ಪಾಂಡವರ ಹಿರಿ ಸೇನೆ!
ಮರುಳು ಮುಬ್ಬಿಗೆ ಸಿಲುಕಿ ನುಚ್ಚಾಗೆ ನೆರೆದಿಹವು;
ಸ್ವಾರ್ಥ ಸೊಕ್ಕುಗಳಿಂದ ಮತಿಯ ತೋಲವ ಕೆಡಿಸಿ
ನಿಂತ ನೆಲೆಯನೆ ಮರೆತು ಸಿಡಿಯುತಿಹವು.

ಕೆಚ್ಚು ಕೊಬ್ಬಿನ ತೆರೆಯ ಇಣಿಕಿ ನೋಡೆಲೊ, ನೋಡು —
ನೀಲಮೇಘಶ್ಯಾಮ ನಡುವಿನಲಿ ನಿಂದಿಹನು,
ದಿವ್ಯಪದಯುಗ ಪಿಡಿದು ಕಣ್ಗಂಗೆ ಜಲದಿಂದ
ಅಭಿಷೇಕಗೈಯುತ್ತ ಪಾರ್ಥನಿಹನು.

ತನ್ನವರು, ಹೆರರವರು, ವೈರಿಗಳು, ಬಂಧುಗಳು
ಎಂಬ ಮಾಯೆಗೆ ಬಗ್ಗಿ ಕರ್ತವ್ಯವನು ಮರೆತು
ದಿಙ್ಮೂಢನಾಗುತಲಿ ತನ್ನರಿವ ಮರೆದಿಹನ
ಕರುಣೆಯೊಳು ಕಾಣುವನು ಮಧುಸೂದನ.

## V

ಕಾಲನಿವನು ತಿರುಗಿ ನಲಿದು ಬರುತಿದಾನೆ
ಯುಗದ ಬಟ್ಟೆ ಕಳಚಿ ಬೇರೆ ಉಡುತಿದಾನೆ
ಉಬ್ಬಿ ನಿಂತು, ಹಬ್ಬಿ ಬಂದು ಸರಿಯುತಾನೆ
ಮಬ್ಬಿನಂಥ ಪರೆಯನೊಂದ ಬೀಸುತಾನೆ.

ನಿನ್ನೆ ಕಂಡ ನೆನಹನೆಲ್ಲ
ಕುರುಡುಗೈದು ಬಿಡುವೆಯಲ್ಲ
ನಾಳೆಯೆಂಬ ನೆನಹನಳಿಸಿ
ಇಂದಿನಾಟದಮಲ ಕುಡಿಸಿ

ಕಾಲನಿವನು ತಿರುಗಿ ನಲಿದು ಬರುತಿದಾನೆ
ಯುಗದ ಬಟ್ಟೆ ಕಳಚಿ ಬೇರೆ ಉಡುತಿದಾನೆ
ಉಬ್ಬಿ ನಿಂತು, ಹಬ್ಬಿ ಬಂದು ಸರಿಯುತಾನೆ
ಮಬ್ಬಿನಂಥ ಪರೆಯನೊಂದ ಬೀಸುತಾನೆ.

---

## ಮುಚ್ಚಿಮಲೆ ಶಂಕರನಾರಾಯಣ ರಾವ್

### ೧ ಬದುಕಿನ ಹಾಡು

ಜೀವವ ಕೊರೆಯುವ
ಸಾವನು ಕರೆಯುವ
ಬಡತನವನು ವೀಣೆ ಗೈದು.
ಹಸಿವಿನ ತಂತಿಯು
ಏರಿಸಿ ಗೋಳಿನ
ರಾಗವ ಮಿಡಿಯುತಲಿಹನು.

ಜೀವದ ಮರೆಯಲಿ
ಕಣ್ಣೀರ ಕೆರೆಯಲಿ
ಅಳುವಿನ ಆಳಕೆ ಮುಳುಗಿ
ಭಾವದ ಕರೆಯಲಿ
ಮೌನದ ತೆರೆಯಲಿ
ರಸಭಾವಗಳನೊಯ್ದು ತೊಯ್ದು.

ಕಾಣದ ಆಳದಿ
ಕರೆ ಕರೆ ತಾಳದಿ
ಗೀತನಿನಾದವ ಕೋದು
ದುಡಿತದ ಸೂರೆಯು
ದುಗುಡದ ಗೋರಿಯು
ಒಳದನಿಯಾಲಾಪಗೈದು.

ಕಿವಿಗಳ ತುಂಬಿಸಿ
ಎದೆಯಲಿ ಬಿಂಬಿಸಿ
ಜೀವದ ತಿರುಳಿಗೆ ಹರಿದು

ಕರುಳನು ಕೊರಗಿಪ
ಕೆಚ್ಚನು ಕರಗಿಪ
ಮರುಕದ ಮಾರ್ದನಿ ಇಹುದು.

ಸಾವಿನ ಉದ್ಗಾರ
ಹಸಿವಿನ ಚೀತ್ಕಾರ
ಎರಡೆಳೆ ಒಂದಾಗಿ ಹೆಣೆದು
ಸೋಲದ ಕೂಗಾಟ
ಕಾಲದ ಬಯಲಾಟ
ಲಟಪಟದನಿಗೂಡಿ ಹಾಡಿ.

ಆರದ ತೀರದ
ಆಶೆಯು ಬೇಗೆಯು
ಬಿಸಿಯುಸಿರೋಟದ ಧಾಟಿ
ಆಗದ ಹೋಗದ
ಬಯಕೆಯು ಕನಸಿನ
ನೀರವದೊಡವೆರೆದಿಹುದು.

ಬೀಳ್ವರ ಮಮ್ಮಲ
ಆಳ್ವರ ಕಿಲಕಿಲ
ಕೂಗಾಟ ನಗೆಯಾಟ ಕೂಡಿ
ರೋಷದ ಕೆರಳಾಟ
ದ್ವೇಷದ ಕೆಣಕಾಟ
ಮೋಸದ ಪಿಕಲಾಟ ಹೂಡಿ.

ದುಃಖದ ಗದ್ಗದ
ಚಿಂತೆಯ ಧಗಧಗ
ಒಂದಾಗಿ ಚಿಟಿಛಿಟಿ ಸಿಡಿದು.
ಮನಸಿನ ಕಳಕಳ
ಜೀವದ ತಳಮಳ
ತಾಳದ ಹದ ಮಿಕ್ಕುತಿಹುದು.

ಬದುಕಿನ ಈ ಹಾಡು
ಕಣ್ಣಿಹ ಕುರುಡರ
ಬೆಂದೊಡಲಿನ ಹೀನ ಪಾಡು.
ಕಿವುಡರು ಕೇಳುವ
ಮೂಕರು ಹಾಡುವ
ಹೊಸ ತೆರವೀ ಸಾಮುಗಾನ.

## ೨ ಬಾ ಹೊರಗೆ ಸನ್ಯಾಸಿ!

ಬಾ ಹೊರಗೆ ಸನ್ಯಾಸಿ!
ಅಲ್ಲಿ ಏಕಾಂತದಲಿ
ಸಾಧಿಸುವೆ ಏನನ್ನು?
ಬಾ ಹೊರಗೆ ನೋಡಿಲ್ಲಿ
ಶತಕೋಟಿ ಯೋಜನ ವಿ
ಶಾಲ ವಿಶ್ವದ ಸ್ಥಿತಿಯು!
ಕಾದಿಹುದು ನಿನಗಾಗಿ
ದೇಶಸೇವೆಯ ಪೂಜೆ!

ಅನ್ನ ಅಂಬಲಿಯಾಗಿ
ದುರ್ದಶೆಗೆ ತುತ್ತಾಗಿ
ಹೊರಳಾಡುತಿದೆ ಎಲ್ಲ
ಲೋಕ; ಬರಗಾಲದಲಿ
ಮುಳುಗಿ ತಳಮಳಿಸುತ್ತ
ಕಂಗೆಟ್ಟು ನರಳುತಿದೆ!
ಹೊಲೆ ಮಾರಿ ಹೊಲಸಾಗಿ
ನಾರುತಿದೆ ಜಗವೆಲ್ಲ!

ಏಕಾಂತ ಧ್ಯಾನವಿದು
ಅವನ ಮುಟ್ಟುವುದೆಂತು!
ದೀನ ಜನರೆದೆಯುರಿಯು
ಜ್ವಾಲೆಯಲಿ ಪರಮಾತ್ಮ-

ಸಾನ್ನಿಧ್ಯವಿದೆ ನೋಡು!
ಬಾ ಹೊರಗೆ ಸನ್ಯಾಸಿ!
ಆ ಜ್ವಾಲೆಯನು ತಣಿಸು.
ಅದು ಸೇವೆ! ಅದೆ ಪೂಜೆ!

ನೀತಿ ಕುಲಕೆಟ್ಟಿಹುದು
ಧರ್ಮ ಕುರುಡಾಗಿಹುದು
ಕರ್ಮನೆಲ ಹಡಿಲಾಗಿ
ಹಾಳು ಬಿದ್ದಿದೆ ನೋಡು!
ಆಯ ತಪ್ಪಿದ ಜಗದ
ಮಾನವ ಸಮಾಜವನು
ಕಟ್ಟುನಿಟ್ಟಿಗೆ ತರಲು
ಸಾಧಿಸೈ ಸನ್ಯಾಸಿ!

ದುಡಿವ ಮೈ ಕಸದಿಂದ
ಕಡೆಯಾಗಿ, ಪರಮ ಪಾ-
ವನವಾದ ಬೆವರು ಹನಿ
ಬಚ್ಚಲಿನ ಕೊಚ್ಚೆಗಿಂ
ತಲು ಹೀನವೆಂದೆನಿಸಿ
ಜೀವನದ ಬಲ ಕುಂದಿ
ಲೋಕ ತಳಮುಳಿಸುತಿದೆ
ನೋಡು! ಓ, ಹಠಯೋಗಿ.

ಸುವ್ಯವಸ್ಥೆಯು ಅಸ್ತಿ
ವಾರ ನೆಲೆತಪ್ಪಿ, ಅಲು
ಗಾಡುತಿದೆ; ಹಳೆ ಜಾತಿ
ನೀತಿ ಧರ್ಮಗಳೆಲ್ಲ
ಹಳತಾಗಿ ಹಳಸಿ ಹಾ
ಳಾಗಿಹವು; ಹಿಂದಿದ್ದ
ಕಟ್ಟು ಕಟ್ಟಳೆ ಎಲ್ಲ
ಕೊಳೆ ನಾರುತಿದೆ ಇಂದು.

ಹೊಸ ನೀತಿ ಹೊಸ ಜಾತಿ
ಹೊಸ ಹೊಸತೆ ಬೇಕಯ್ಯ!
ಹೊಸತಾಗ ಬೇಕೆಲ್ಲ.
ಹೊಸತಾದ ತಳಹದಿಯು
ಮೇಲೆ ಹೊಸ ಧರ್ಮವನು
ನಿಲಿಸಿ ಲೋಕದ ಕ್ಷೇಮ
ಸಾಧನೆಗೆ ಹೆಣಗಾಡಿ
ಹೆಣವಾಗಬೇಕಿಂದು!

ಕಾವಿ ಬಟ್ಟೆಯನುಟ್ಟು
ಕೆನೆಹಾಲು ಮೊಸರುಂಡು
ನಿಶ್ಚಿಂತನಾಗಿರುತ
ಸುಖದ ಸೊಗಸನು ಸವಿದು
ಧ್ಯಾನಮಾನಸನಾಗಿ
ಓಂಕಾರ ಜಪದಿಂದ
ತೃಪ್ತನಾದರೆ ಸಾಕೆ!
ಹೇಳು, ಓ ಸನ್ಯಾಸಿ!!

ವಿಶ್ವವನೆ ಕರಗಿಸುವ
ಬಡತನದ ಕುಲುಮೆಯಲಿ
ನಿನ್ನ ಶಕ್ತಿಯನೆಲ್ಲ
ಪುಟವಿಟ್ಟು ಹಳಿಕಂತೆ-
ಗಳ ಸುಟ್ಟು ಜಗದಸಂ-
ತೆಯ ಜನದ ಸೇವೆಯಲಿ
ಬದ್ಧಕಂಕಣನಾಗಿ
ಬಾ, ಹೊರಗೆ ಸನ್ಯಾಸಿ!

ಧ್ಯಾನಯೋಗವ ಬಿಟ್ಟು
ಕರ್ಮಯೋಗವ ತೊಟ್ಟು
ಹೃದಯದಲಿ ಹುದುಗಿರುವ
ಆ ಸುಪ್ತ ಬ್ರಹ್ಮನನು
ಚೇತರಿಸಿ ಹೊಸ ಶಕ್ತಿ
ಯನು ಹೊಂದು; ಎಲ್ಲಿ ಹುಡು
ಕುವೆ ನೀನು? ಬಾ, ಹೊರಗೆ
ಮುಕ್ತಿ ಅಡಗಿಹುದಿಲ್ಲಿ!

---

## ಬಿ. ಸುಬ್ಬಣ್ಣ ಹೆಗ್ಡೆ

### ಪ್ರೀತಿ ದೀಪ

ಅಂದು ನಿನ್ನ ತಂದೆ ತಾಯಿ
ತಂದು ನಿನ್ನ ನನ್ನ ಕರದಿ
ಹೊಂದಿಸಿದರು ಮರೆತೆಯೇನು
ಮಂದಗಾಮಿನಿ?
ಬಂದ ಬಂಧುಬಳಗ ಹರಸಿ
ತಂದು ಭಾಮಿನಿ!
ಚೆಂದದಗ್ನಿಯಿಂದಿರು ನೀನು
ಸಿಂದೆ ಕಾಮಿನಿ!
ಸಂದ ವಿಭವ ನೆನೆದು ಮೋಹ
ಹೊಂದು ಮೋಹಿನಿ!

ಉರಿಯುತಿದ್ದ ಅಗ್ನಿ ಸಾಕ್ಷಿ!
ನೆರೆದ ಬಂಧು ಬಳಗ ಸಾಕ್ಷಿ!
ಹರಸಿದಂಥ ದ್ವಿಜರು ಸಾಕ್ಷಿ!
ಮಡದಿತನಕಿದೂ
ಥರವೆ ಮರವೆ ಪತಿಯನೆನ್ನ
ಜರೆದು ನುಡಿವುದೂ?
ಜರೆದು ಎದೆಯ ಕ್ರೂರತನದೆ
ಇರಿಯುತಿರುವುದೂ?
ಇರಿದು ಮೋಹ ಕುಡಿಯ ಹುಟ್ಟ
ಹರಿಸುತಿರುವುದೂ?

ದುಡಿದು ದುಡಿದು ದುಗುಡವಾಂತೆ
ಪಡಿಸೆ ನಿನಗೆ ಹರುಷ ಕಾಂತೆ
ನಡಿಸು, ನೇಹಗೊಳ್ಳು, ಬೀರು
ಪ್ರೇಮಕಿರಣವಾ.

ಬಿಡಿಸು ಮನದ ಬೇಸರವನು
ಬಡಿಸು ಮೋದವಾ.
ಸುಡಿಯು ಸುಧೆಯು ಸವಿದು ತೋರು
ಮುಡದಿ ಪ್ರೇಮವಾ.
ಬಡಿವ ಎದೆಯ ತಂತಿಗಳಲಿ
ನುಡಿಸು ನೇಹವಾ.

ರಮಣಿ ನಿನ್ನ ವರಿಸಿದೆನಗೆ
ಗಮನಕೊಡದೆ ಪ್ರಣಯವಿಡದೆ
ಗಮಿಸುತಿರುವುದೇನು? ಹಾ-
ಳು ಮುನಿಸು ನಿನ್ನದೂ.
ಶಮೆಯ ವಹಿಸು ಸರಸವಿರಿಸು
ಕ್ಷಮಿಸು ಕಾಮಿಸು.
ವಿಮಲ ಮಮತೆಯಿಂದ ಮನದ
ಭ್ರಮೆಯ ನೀಗಿಸು.
ಭ್ರಮಿತ ಹೃದಯ ತಳಮಳದ
ತುಮುಲವಡಗಿಸು.

ಆರುತಿಹುದು ಪ್ರೀತಿ ದೀಪ
ಏರುತಿಹುದು ಮನದ ತಾಪ
ಮಿಾರುತಿಹುದು ಮೇರೆ ಮೋಹ
ತೋರು ಕರುಣೆಯ.
ಧಾರೆಯಾಗಿ ಸುರಿವ ಕಣ್ಣ
ನೀರನೊರಸೆಯಾ.
ನೀರನೊರಸಿ ಚುಂಬಿಸುತಲಿ
ನೀರೆ ಸ್ಫುರಿಸೆಯಾ.
ನೀರೆ ಸ್ಫುರಿಸಿ ಮುದದೊಳೊಮ್ಮೆ
"ನೀರ"ನೆನ್ನೆಯಾ?

---

## ಎಮ್. ಎನ್. ಕಾಮತ್

### ೧ ನಮ್ಮ ಬೇಡಿಕೆ

(ಇಂದಿನ ಶ್ರಮಜೀವಿಗಳ ಬಯಕೆ)

ನಮ್ಮ ಬೇಡಿಕೆಯೇನು ಬೇಡಿಕೆಯೊ? ಬಯಕೆಯೋ?

ನಿಮ್ಮ ಕರುಣೆಯ ಕಾಸಿನೆಮ್ಮ ಕಿಸೆಗುಬ್ಬರವ
ನುಮ್ಮನೇ ಬೇಡೆವೈ;—ನಮಗೊಂದು ನೆಲೆ ಬೇಕು.
ಹೇಡಿ ಬಯಸುವ ಸ್ವರ್ಗ, ಗೂಢಸೂಕ್ತಿಯ ಅರ್ಥ
ಬೇಡೆವೈ;—ಪುರುಷತೆಯ ಸಾಧನೆಗೆ ಬೆಲೆ ಬೇಕು.

ದೂರದೃಷ್ಟಿಯ ಬದಲು ದೃಷ್ಟಿವೈಶಾಲ್ಯವನು,
ಭೂರಿಬೆಳಸಿನ ಬದಲು ಆತ್ಮವಿಕಸನವನ್ನು
ಬೇಡುವೆವು. ನೆಲನೀರುಗಾಳಿಗಳ ಸಾಮ್ರಾಜ್ಯ
ಬೇಡೆವೈ. ಬೇಕೆಮಗೆ ಹಸನುನೆಲ, ಒಸರೊಂದು.

ಸಕಲರುಮ್ಮಳವೊಂದು ಸರ್ವಾಧಿಕಾರ ಪಡೆ-
ದಖಿಲತೆಗೆ ಒಂದೂರೆ, ಒಂದು ಗುಡಿಯೇ ಭಿತ್ತಿ;
ಚುರುಕುಮಿದುಳಿನ ಜ್ವಲಿಸುವೆದೆಯ ಮುಂದಾಳೊಬ್ಬ-
ನುರವಣಿಸಿ ನಡೆಸಲೆಮ್ಮನು ತನ್ನ ಧೃತಿಯಿಂದ.

ನೆತ್ತರಿನ ಮೂಳೆಗಳ ಕೈಕಾಲುಕಣ್ಣುಗಳ
ಶಕ್ತಿಯಿಂದೆಲ್ಲರಿತ್ತುವ ಸಂಪದವೆ ನಮಗೆ;
ಎಲ್ಲರುತ್ಪನ್ನಗಳು ಎಲ್ಲರೊಳು ಪಾಲಾಗಿ,
ಚಿತ್ತವೇ ಸೊತ್ತಾಗಿ, ಸೊತ್ತೆಲ್ಲ ತೊತ್ತಾಗಿ,
ಮೈತ್ರಿಯೇ ಶಾಂತಿಶಾಸನವಾಗಿ ಸಿಗಬೇಕು.

ಹಂಚಿಕೆಯ ಲಂಚದಿಂ ಕೊಂಡ ನೆಲ ಭೂಮಿಯೇ?
ವಂಚನೆಯ ಚಿನ್ನಬೆಳ್ಳಿಗಳ ಧನಿಗುಂಟೆ ದನಿ?
ದೃಢತೆಯೆಂಬಾ ವಜ್ರ, ಸಾಹಸದ ಕಡಿಮುಕ್ಕು,
ಮಿದುಳೆದೆಗಳೊಪ್ಪಿರುವ ನಾಣ್ಯಗಳಿವೇ ಹಣವು.
ಮುದ ನಾಳೆಗೆಂಬ ಮಾತನು ಮರೆವ ಯುಗ ಬೇಕು.

ಮುಂದೆ ಮುಂದರಿವೆವೆಂಬಾತುರಕೆ ಗತಿಯಿಲ್ಲ;
ಇಂದಿನೊಳೆ ಮುಂದುಸಾಧನೆಗೊಂದು ಮಿತಿಯಿಲ್ಲ.
ಹಾಳು ಇಂದಿನ ಗೋಳಿನಿಂದಾಳು ಎದ್ದೇಳಿ,
ಬಾಳುವೆಯು ಬೆಳಸಿಂದ ನಿಜವರಿತ ಕಾದಾಳಿ,
ಜನತೆಗಪಕಾರಿಯಾದಾ ತೃಪ್ತಿಜಾಡ್ಯವನು
ಮನದಣಿಯೆ ದುಡಿಯುತ್ತ ಬಡಿಯುತ್ತ ನೀಗಿಸಲಿ.

ಹುಟ್ಟೂರ ತೊರೆದದನು ಸುಟ್ಟೂರನಾಗಿಸುವ
ಕೆಟ್ಟಬಾಳಿಗೆ ವಿಧಿಯ ನಿಷ್ಠುರತೆ ಕಾರಣವೆ?
ಮಣ್ಣಿದ್ದು ಕೈಯಿದ್ದು ತಾಯ್ನಾಡ ತೊಲಗುವರೆ?
ಮಣ್ಣಿದ್ದ ಹಿರಿಯರಂದಿನ ನೆತ್ತರಿನ ಬೆವರ
ಮುನ್ನೀರೆ ಮಣ್ಣಿನಲಿ ಸತ್ವ ತುಂಬಿಟ್ಟಿದ್ದು,
ದಣಿವಿರದೆ ದುಡಿವಂತೆ ಬೇಸರಿಕೆ ಕಡಿವಂತೆ
ಇನಿದಾವ ನುಡಿಗೂಡಿ ಮುದ್ದಾಗಿ ಹಾಡಿದ್ದು,
ನೋಡುತ್ತ ಕೈತಟ್ಟಿ ಕೂರದಲೆ ಸಾಹಸದಿ
ಆಡುತ್ತ ದಿಕ್ಕೆಲ್ಲ ಬೆರಗುಗೊಳುವಂತಿದ್ದು,
ಹೆತ್ತೂರಿನಿಂದ ಮತ್ತೂರಿಲ್ಲವೆನ್ನಿಸಲು
ಬಿತ್ತುದೆಲ್ಲವನಂತವಾಗಲಾಸರೆಯುಂಟು.

ಬಾನಿನಾಚೆಗೆ ನೋಟ, ಯುಗದ ಕೊನೆಗೂ ಓಟ,
ತಾನೆಂಬುದೆಲ್ಲರೆಂಬಾ ನಂಬುಗೆಯ ಶಾಂತಿ
ಉಸಿರಾಗೆ, ಚಿತ್ತವೇ ಸೊತ್ತಾಗೆ, ಗೈಮೆಯೇ
ಹೆಸರಾಗೆ, ನರನಾಗಿ ಪುಟ್ಟಿದುದೆ ಸಿರಿಯಾಗೆ,
ಬೆವರಮಳೆ ಸುರಿಯುವಧಿಕಾರವೇ ಅರಸಾಗೆ,
ತವರೂರಿಗೈದುವಂತೊಂದುದಿನ ಪೋಪಂತೆ,
ಅಳಿದರೂ ಉಳಿದವರ ನಾಡಿಯಲಿ ನಲಿವಂತೆ,
ಕಡಿದಂತೆ ಚಿಗುರುವಶ್ವತ್ಥಗಳ ಜೀವನವ
ಬೇಡುವೆವು.

ಇದೆ ನಮ್ಮ ಬೇಡಿಕೆಯೊ, ಬಯಕೆಯೋ!

## ೨ ಗ್ರಾಮ ಸೇವಕರ ಹಾಡು

**ಮೇಳದ ಭಜನೆ**

ಭಾರತವರ್ಷವಿದೊಂದೇ ಗ್ರಾಮ,
ಭಾರತವಾಸಿಗಳೊಂದೆ ಕುಟುಂಬ,
ನೂರುಮತಗಳಲಿ ಒಂದೇ ಧರ್ಮ,
ನೂರುಮಾತುಗಳೊಳೊಂದೇ ಮರ್ಮ
ಒಂದೇ ಕುಲದಲಿ, ಒಂದೇ ಛಲದಲಿ,
ಒಂದೇ ಬಲದಲಿ ಬಳೆದವರೆಂದೂ
ಒಂದೇ ಜನಪದ ಒಂದೇ ಸಂಪದ
ಒಂದೇ ಹಾದಿಗೆ ಕಾಲಿಡಲೆಂದೂ.

ಅನ್ನಪೂರ್ಣೆ ಹಸಿದಿರುವವಳಂತೆ,
ಸ್ವರ್ಣಗರ್ಭೆ ದೀನಾನನೆಯಂತೆ,
ಪುಣ್ಯಭೂಮಿ ಸಮರಾಂಗಣವಂತೆ,
ತನ್ನವರಾರೂ ಕಿವಿಗುಡರಂತೆ!
ಬಳಗಗದ್ದಲದಿ ಕೇಳುವುದುಂಟೆ?
ಒಳಜಗಳಗಳಲಿ ಬಾಳುವುದುಂಟೆ?
ಹಳಬರ ಮರೆತಿರಿ, ಹೊಸತೊಂದರಿಯಿರಿ,
ತಲೆಗೆಡುವಿರಿ ಕಾಲಿಡಲರಿಯದಿರೇ.

ಮೂವತ್ತೈದಿದೆ ಬಟ್ಟಲನಿಟ್ಟು,
ಬೇವುತ್ತಿದೆ ಹಸಿವಿಂದಿನ್ನೆಷ್ಟು!
ಸಾವಿಗೆ ತುತ್ತಾಗುವ ಜಡರೆಷ್ಟು!
ಜೀವನಕೊಂದಿದೆ ಮರೆತಿಹ ಗುಟ್ಟು—
ಬೆವರೇ ಮಣ್ಣಿಗೆ ಪೌಷ್ಟಿಕ ತತ್ತ್ವ,
ಬೆವರೇ ನವಸಂಜೀವನ ಸತ್ತ್ವ,
ಬೆವರಲಿ ಮಿಂದರೆ, ಹಸಿವಿನ ತೊಂದರೆ
ಜವನಿಗೆಯಲ್ಲದೆ,—ಜನಕೆಲ್ಲುಂಟು?

"ಆಡುವರಲ್ಲದೆ, ಮಾಡುವರಿಲ್ಲ;
ನೋಡುವರಲ್ಲದೆ, ಕೂಡುವರಿಲ್ಲ;
ಬೇಡುವರಲ್ಲದೆ, ನೀಡುವರಿಲ್ಲ;
ನಾಡೆಲ್ಲವು ಕಾಡಾಗುವುದಲ್ಲ!"
ಕಣ್ಣೀರಿಡುವಾ ತಾಯ್ನುಡಿ ಕೇಳು!
ಕಣ್ಣರಳಿಸಿ ಧೃತಿಯಿಂದೆದ್ದೇಳು!
ಮಣ್ಣನು ಬೆವರಿಂ ಪುಟಕಿಡಬಲ್ಲರೆ,—
ರನ್ನವಾಗುವುದು ಬೆಂದೊಣ ಮಳಲು.

ತನ್ನನೆ ಉದ್ಧರಿಸುವ ಬಗೆ ಬೇಕು;
ತನ್ನವರಲಿ ಬೆರಸುವ ನಗೆ ಬೇಕು;
ತನ್ನದೆಲ್ಲವೆಲ್ಲರಿಗೆನ ಬೇಕು;
ತನ್ನೆದೆಗೆಲ್ಲರ ಭರವಸೆ ಬೇಕು;—
ಬೇಡುವ ಕೈ ನೀಡಲು ಬಲಿಸುವುದು,
ಆಡದೆ, ಹಿರಿದನೆ ಮಾಡಕಲಿವುದು;
ನೋಡುತಿರದೆ ಒಡನಾಡುವುದಾಗಲೆ
ಕಾಡೆಲ್ಲವು ಚೆನ್ನಾಡಾಗುವುದು.

## ಪ್ರಮಾಣ

ಮುಂದಿನ ನಾಯಕರಿಂದಿನ ಬಾಲಕ
ವೃಂದವೆಂದು ನಾವ್ ನಂಬಿಹೆವು;
ಮುಂದಿನ ಭಾರತಸಂಪದಕಾರಕ-
ರೆಂದೇ ನಂಬುಗೆ ತುಂಬಿಹೆವು

ಭಾರತವರ್ಷಗ್ರಾವಿಣಾಣರ ಪರಿ-
ವಾರದಿ ಸೇರುತ ಸಾಧಿಸುವಾ!
ತಾರಕವೊಂದೇ ಕಾರ್ಯಾಸಕ್ತಿಯು-
ಪಾರಮಹಿಮೆಯನೆ ಬೋಧಿಸುವಾ

"ಅರೆಹೊಟ್ಟೆಯು ಕಿರುಬಟ್ಟೆಯು ದಿನಗಳ
ಮರೆಯಿರಿ; ಸಹಕಾರದಿ ಬಲಿತು
ತಿರುಪೆಯು ಕೈಯಲಿ ನೇಗಿಲಿರಲಿ, ಮೈ-
ಮುರಿದು ದುಡುಕಿ ದುಡಿಯುವ ಎಲ್ಲರಿಗೂ"

ಪಶುಗಳೆನದೆ ಬರಿದೋಡುವ; ಸುತ್ತಲ
ವಸುಧೆಯು ವಾರ್ತಾಸಾಹಿತ್ಯದಲಿ
ವ್ಯಸನಿಗಳಾಗಿ, ನಿರ್ಮಲ ಸುಖಜೀವನ
ಬೆಸನದ ತೃಪ್ತಿಯು ಬೇಡುವ ಹಿತದಲಿ

ಗ್ರಾಮಗ್ರಾಮದಿ ಭಾರತವರ್ಷವ
ಪ್ರೇಮದಿ ನಿರ್ಮಿಸಿ ಅರ್ಚಿಸುವ!
ಈ ಮಹಾಜನಾಭಯಪ್ರಸಾದದಿ
ಕ್ಷೇಮವೊದಗುವೊಲು ಯಾಚಿಸುವ

## ೩ ಹೊಲೆಯನ ಹಂಬಲ

'ಪತಿತಪಾವನ' ಬಿರುದು ನಿನಗೆ ಸಲಬೇಕೆಂದು
ಪತಿತರಾಗಿಯೆ ನಮ್ಮವರು ಬಾಳಬೇಕೇ?
ಬಿರುದುಗಳ ಮೋಹವನು ಮಾನವರೆ ತೊರೆದಿರಲು,
ಪರಮಪುರುಷನಿಗೇಕೆ ಬಿರುದಿನಗ್ಗಳಿಕೆ?

ಲೋಕಕಲ್ಯಾಣವಾಗುವ ತೆರದಿ ಸಾಕ್ಷಿ, ನಿ-
ನ್ನಾಕಣ್ಣಿಗೆವೆಯಿಲ್ಲ, ತೆರೆದ ಕಣ್ಣವನೇ!
ಮುಚ್ಚಲಾರದ ಕಣ್ಣ ಮುಚ್ಚುವೆಯೊ, ನಮ್ಮ ಕ-
ಣ್ಣಿಗೆಚ್ಚು ತಾಗುವುದೇನು ದುರ್ಭಾವನೆ!

ಸಾಮೀಪ್ಯಸಾಲೋಕ್ಯ ಪದವಿಗಳ ಭಕ್ತರಿಗೆ
ನೇಮಿಸುವ ಪರದೈವ, ನಿನ್ನ ಬಿಂಬವನು
ಕತ್ತಲಿನ ಗುಡಿಯೊಳಗೆ ಬಚ್ಚಿಟ್ಟಿಹರು; ನಾವು
ಅತ್ತ ಸುಳಿದರೆ ನಿನ್ನ ಮೈಗೆಡುವುದೇನು?

ಭಕ್ತರಿಗೆ ತನ್ನ ತೆತ್ತಿಹುದೆ ನಿನ್ನಯ ಬಾಳ್ಕೆ;
ಅತ್ತ ಸುಳಿಯಲು ಬಾರದೆನ್ನ ಗುಡಿಸಲಿಗೆ,—
ಪದದಲಿತ ಬಲಿಯ ಪಾತಾಳದರಮನೆ ಕಾಯ್ವ
ಮುದದೋರಿ—ಬಾ, ದಲಿತನೆನ್ನ ಬಾಗಿಲಿಗೆ!

ಸೆರೆಯ ಕತ್ತಲಕೋಣೆ ದೇಗುಲದ ತೊರೆ; ನಮ್ಮ
ಮರೆದ ಪೂಜಾರಿಯುನು ತೊಲಗಿ ಬಾರಿತ್ತ;
ನೀನಿರದೆ ಒಕ್ಕಲಿಲ್ಲದ ನನ್ನ ಹೃದಯುದಲಿ
ಸಾನುರಾಗದಿ ಸುಳಿದು ಬೆಳಕ ಬೀರಿತ್ತ!

ಕೊಳೆಯಲ್ಲಿ ಬೆಳೆದಿರುತ, ಕೊಳೆ ತೊಳೆವ ಪಾಡೆಮಗೆ,
ಮಲಿನತೆಯ ನಿರ್ಮೂಲನಕೆ ಜನ್ಮವೆತ್ತಿ;
ಹೊರಗೆ ಕೊಳೆ ಮೆತ್ತಿದರು, ಒಳಗೆ ನೀ ಜೀವಾಳ;
ಶರಣು,—ಪಾವನ ನಿರಂಜನ ನಿತ್ಯ ಜ್ಯೋತಿ!

## ೪ ದೀಪಗಳು

ಚಿನ್ನದ, ಕಲ್ಲಿನ, ಕಂಚಿನ, ಗಾಜಿನ,
ಮಣ್ಣಿನ, ದೀವಿಗೆ ಅಲ್ಲಲ್ಲಿ;
ಉನ್ನತ ಕಂಭಗಳಂತಿವೆ ಹಲವು;
ಸಣ್ಣ ಹಣತೆಗಳು ಎಲ್ಲೆಲ್ಲಿ.

ಸಿಡಿಲಮರಿಗಳಿವೆ, ಮಿಂಚುಹುಳುಗಳಿವೆ,
ಕಿಡಿಮಿಣುಕುಗಳಿವೆ, ತಾರೆಗಳು;
ಬೆಡಗಿನ ತಳುಕಿದೆ, ಪ್ರತಿಭೆಯ ಹೊಳಪಿದೆ,
ಮಿಡಿ-ಹೂ-ಹಣ್ಗಳ ರೂಪುಗಳು.

ತೊಟ್ಟಿಲ ಬಳಿ, ಸುಡುಗಾಡಿನ ಬಳಿ, ಮು-
ಮ್ಮೆಟ್ಟಿಲ ಬಳಿ, ಮೇಲ್ಗಟ್ಟಿನಲೀ;
ಕಟ್ಟೆಯ ಮೇಲರಮನೆಯಟ್ಟದಲೀ
ಬೆಟ್ಟದ ದೇವೀ ಮಂದಿರದೀ.

ಹೊಗೆಯುವು ಹಲವು; ಧಗೆಯುವು ಕೆಲವು;
ಹೊಗುವುವು ಗುಡ್ಡದೊಳಗು ಕೆಲವು;
ನಗುತಿವೆ ಸಿಡಿಯುತೆ, ಅಳುತಿವೆ ನಡುಗುತೆ,—
ಬಗೆಬಗೆಯಾಗಿದೆ,— ಈ ಚೆಲುವು!

ಕತ್ತಲೆ ತೋರುವ, ಕತ್ತಲೆ ನುಂಗುವ
ಮೃತ್ಯುವ ಗೆಲ್ಲುವ ಜ್ಯೋತಿಗಳು;
ಸುತ್ತಲು ಬೆಳಗುವ, ನೆತ್ತಿಯಲುರಿಯುವ,
ಆತ್ಮಪ್ರಕಾಶನ ಜ್ಯೋತಿಗಳು.

ಒಂದುಸಿರಲಿ ಮುಗಿವುವು ಕೆಲವಿರುವುವು
ಒಂದುನೂರು ಯುಗಗಳ ವರೆಗೂ;
ಇಂದಾರಿದರೂ ಮುಂದೆ ತೋರಲಿವೆ
ನೊಂದಂತಿದ್ದರೂ ನೊಂದವವು.

ಎಣ್ಣೆ ಮುಗಿದರೂ, ಕಿಡಿಯಾಗುರಿವುವು;
ನುಣ್ಣನೆ ಬೂದಿಯು,— ಕಿಡಿಯಾರೆ;
ತಣ್ಣಗೆ ಬೂದಿಯು ವಾಸನೆಕೊಡುವುದು,
ಪುಣ್ಯಕರ್ಮಸ್ಮಾರಕವಾಗೆ.

## ೫೭ ಅವನ ಧರ್ಮ

(ದಾಸರ ಪದದ ಧಾಟಿ—ರೂಪಕ)

ನಿನ್ನ ಲೀಲೆಯ ನೋಡಿ ದಣಿಯೆನೋ, ಶ್ರೀರಂಗ!
ಎನ್ನೊಳರಿತೆನು ದೇವ ನಿನ್ನಂತರಂಗ. ॥ ಪಲ್ಲ ॥

ಕತ್ತಲಲಿ ಭೂತ ಕಾಣುವುದೇಕೆ? ಹಿತ್ತಿಲಿನ
ಉತ್ತಮದ ಮೂಲಿಕೆಯ ಬಗೆಯರೇಕೆ?
ಮೃತ್ಯುವಿನ ಸಾಮ್ರಾಜ್ಯದಲ್ಲಿದ್ದು ನರಕೀಟ
ನಿತ್ಯಜೀವಿಯು ಎಂದು ನಗುವುದೇಕೆ?

ತೋಳನೀಡುವ ಮುನ್ನ ಎಳಗೂಸು ಚಂದಿರನ
ತಾಳಬೇಕೆಂದಳುತ ಕೂಗಲೇಕೆ?
ಬಾಳಿದುದು ಸಾಕೆಂದು ಗೋಳಿಡುವ ಹಳಬ, ಕೊನೆ-
ಗಾಲದಲಿ ಉಳಿಯಬೇಕೆಂದಳುವನೇಕೆ?

ಕೂಸಿಲ್ಲವೆಂದತ್ತು ಹೊತ್ತು ಹರಕೆಯ ಮುನ್ನ
ಕೂಸ ಹಡೆವಾಗ ಬೇಡಿದರಾರೆನುವಳು;
ಕಾಸಿಲ್ಲದಾಗ ಸದ್ಧರ್ಮಗೈನಾಸೆಯಿರೆ,
ತಾಸಿನಲಿ ಹತ್ತರ್ಬುದವ ವ್ಯಯಿಸುತಿಹರು.

ಇಲ್ಲದುದರಲಿ ಆಸೆ, ಇದ್ದುದರಲತೃಪ್ತಿ,
ಸಲ್ಲದುದರೆಣಿಕೆಯಿಲ್ಲದೆ, ಸಾಲಪಡೆದು,
ಚೆಲ್ವಾಗಿ ಇಟ್ಟಂತಿರದೆ, ಕಂಡಬಟ್ಟೆಯಲಿ
ಕಾಲಿಟ್ಟು ತಿರುತಿರುಗುವರು ಕರ್ಮಹಿಡಿದು

ನಿನ್ನಚ್ಛೆನಲಿ ಹೊಯ್ದು ರೂಪವಿರಲದರ ಸಂ-
ಪನ್ನತೆಗೆ ಬೆಡಗುಹೆಚ್ಚಿಸೆ ಕೆಡುವರೇಕೆ?
ತನ್ನದೆಲ್ಲವ ನಮಗೆ ಕೊಟ್ಟ ಧನಿ ನೀನಿರಲು,
ನಿನ್ನಿಚ್ಛೆ ನಡೆಸೆ ಮರೆಯುತ ದುಡಿಯರೇಕೆ?

ಎಲ್ಲಕ್ಕು ಗತಿ ನೀನು, ನಿನಗೆ ಗತಿ ಬೇರಿಲ್ಲ;
ಬಲ್ಲವನು ತಾನೆಂದು ಗೂಢವಿರುವೆ;
ಹುಲ್ಲು ಕಡ್ಡಿಯನೆಸೆದು ಬ್ರಹ್ಮಾಂಡ ಬಿರಿಯಿಸುವೆ;—
ಸಲ್ಲದೈ ನಿನ್ನಿಚ್ಛೆ ನಾಸಿಲ್ಲದೆ!

## ೬ ಬೆಂಬಲ

(ರೂಪಕ)

ಕಣ್ಣಮುಂದಿರದೆನ್ನ ಬೆನ್ನ ಹಿಂದಿರಲೇಕೆ
ಬೆನ್ನಿಗೆ ಕಣ್ಣುಂಟೆ ಇನ್ನೇಕೊ ಶ್ರೀರಂಗ? ॥ ಪಲ್ಲವಿ ॥

ಬೆನ್ನಬಲಕೆ ನಿಂತು ಎನ್ನ ನಡೆಸುತಿರೆ
ಮುನ್ನ ಕಾಲೆಡವಂತೆ ನೀನೆ ಹವಣಿಸುವೆ
ಮಣ್ಣಮುಕ್ಕಲು ಬಿದ್ದ ನನ್ನ ನೀನೆತ್ತುತ
ತನ್ನಂಥ ಪೊರೆವರು ತೋರೆಂದು ನಗುತಿಹೆ.

ಕಣ್ಣ ಮುಂದಕೆ ನಿಂತು ಎನ್ನ ಕೈಪಿಡಿಯುತ್ತ
ಮುನ್ನೆನ್ನನ್ನೊಯ್ದರೆ ನಾನು ಕಂಗೆಡುವೆನೆ?
ನೀನೆ ಗತಿಯು ಎಂದು ಕಣ್ಣು ತಿಳಿದುಕೊಂಡು
ನಿನ್ನ ಹೊಣೆಗೆ ಮುಂದು ನ್ಯೂನವಾಗುವುದುಂಟೆ?

ಮುಂದಿದ್ದರೆನ್ನಯ ಕುಂದುಕರ್ಮವು ನಿನ್ನ
ಹೊಂದುವುವದಕಾಗಿ ಹಿಂದೆ ನಿಲ್ಲುವುದೆ?
ಮಂದಭಾಗ್ಯನ ನನ್ನನೆಂದಿಗೂ ಬಿಡಲಾರ
ದಂದದ ಬಂಧುತ್ವ ಸಂದುದೇ ಹಿಂದಿರೆ?

ಹಿಂದೆ ಕುಳಿತು ರಥವನಂದು ನಡೆಸಿದೆಯಾ?
ಇಂದೂ ನಿನ್ನಿಚ್ಛೆಯು ಅಂದಿನಂತಿರದೆ?
ಮುಂದೇರು ರಥದಲಿ ಮುಂದಿಯ ತೋರಿಸು,
ಹೊಂದುವೆ ಜಯುವ ಸಂಸಾರಸಮರದಲಿ.

ನೀನೆನ್ನ, ನಾನಿನ್ನ ಕಣ್ಣಿಗೆ ಕಣ್ಣಾಗಿ,
ಜನ್ಮಯಾತ್ರೆಯುಗೈವ ಪುಣ್ಯವಿದು!
ನೀನು ಮುಂದಿರದಿನ್ನು ನಾನು ಕಾಲಿಡಲೊಲ್ಲೆ,
ನೀನೆಷ್ಟು ದಿನ ಕಾದುನಿಲುವೆಯೊ ನೋಡುವೆ!

ತಿಳಿದವನಲಿ ನಿನ್ನ ಛಲ ನಡೆಯದು, ಬಂಧು!
ನಲವಿಂದ ಪಿಡಿದು ಕೈ ನಡೆಯಯ್ಯ ಮುಂದು!
ಹಲವು ಯುಗಗಳಾಚೆ ಕೋಟಿಜನ್ಮಗಳಾಚೆ
ಬಳಲದೆ ನಮ್ಮಯ ಮಂದಿರ ಸೇರುವೆ.

## ೭ ತಾಯಿ

(ರೂಪಕ)

ತಾಯಿ ನೀನೆಂದು, ನಾ ಬಾಯಾರಿದೆನು ಕೂಗಿ,
ಹಾಯಾಗಿ ಬಾರದೆ, ನೋಯಿಸುವುದೆ ರಂಗ? ॥ ಪಲ್ಲವಿ ॥
ಯಾವ ಲೋಕದ ಕಸಗುಡಿಸಿ ಮುಸುರೆ ತೊಳೆ
ದಾವ ಭಾವಿಯ ನೀರ ಬಚ್ಚಲಿಗೊಯ್ವೆ?
ಯಾವ ಒಲೆಯ ಮೇಲೆ ಪರಮಾನ್ನ ಬೇಯಿಸಿ
ಯಾವ ಅತಿಥಿ ಪೂಜೆಮಾಡುತಿರುವೆ, ರಂಗ?

ನೆರೆಮನೆಯಿಂದಕ್ಕಿ ಎರವು ತರಲು ಪೋಗಿ
ಪರಿಪರಿ ಸುದ್ದಿಯನಾಡುತುತ್ಸವದ
ಮೆರವಣಿಗೆಯು ವಾದ್ಯಸ್ವರವನಾಲಿಸುತತ್ತ
ಭರದಿ ಕೈಬೀಸಿ ಪೋಪರೆ ಮರೆಯುತಲೆನ್ನ?

ಮಾವ ಅತ್ತೆಂದಿರ ಸೇವೆಮಾಡುತ, ತನ್ನ
ಭಾವನೊಡನೆ ಚಕ್ಕಂದವನಾಡುತ
ಬೇಷಮಾತುಗಳಾಡೆ ನಾದಿನಿ ತವರ್ಮನೆ
ಭಾವಿಸಿ ಮೈಮರೆತಿರುವೆಯೋ, ಶ್ರೀರಂಗ

ಕೂಗಿದೊಡನೆ ಬರಲಾರೆಯಾದರೆ, ನಾನು
ಕೂಗದ ತೆರ ಸಂತವಿಡಬಾರದೇ?
ತೂಗು ತೊಟ್ಟಿಲಬಳಿ ಬಾಗುತ ಜೋಗುಳ
ರಾಗದಿ ಸುಮಧುರ ಗೀತೆಯ ಹಾಡಿರು

ತನ್ನ ಮಗುವಿನೊಳುಪೇಕ್ಷೆಮಾಡಿದರೆ ನೀ
ಮುನ್ನ ಜನ್ಮದಿ ಹುಟ್ಟು ಬಂಜೆಯಾಗೀ
ಚೆನ್ನಾದ ಭಕ್ತರಿಲ್ಲದ ದೇವಮೂರ್ತಿಯ
ಬನ್ನ ಬಡುವ ವಿಧಿ ಬೆನ್ನಬಿಡದು ನಿನ್ನ

ನಾನಿಲ್ಲದಿದ್ದರೆ ನಿನ್ನ ಕರುಳು ತಂಪೇ?
ನೀನಿಲ್ಲದಿದ್ದರೆ ನಾನು ತಬ್ಬಲಿಯೂ!
ನಿನ್ನ ಮಾಟಕೆ ನನ್ನ ಮಕ್ಕಳಾಟಕೆ ಗಂಟು;
ನಿನ್ನ ತೋಳಲಿ ಸೆರಗಿನ ಮರೆಯೊಳಿರಿಸು

## ೮ ಹೂವ್ವು ಹಂಬಲಿಸಲೇಕೆ?

ನಿನಗಾಗಿ ಬರಿದೆ ನಾ ಹಂಬಲಿಸಲಾರೆನ್ನೈ
ಎನಗಾಗಿ ನಿನ್ನ ಹಂಬಲನರಿತೆ, ದೇವಾ ॥ ಪಲ್ಲ ॥

ಅಮಿತಯುಗಗಳ ಯತ್ನದಿಂದೆನ್ನ ಅರಳಿಸುವೆ;
ಅಮಿತಾಣು ಅನುಭವಗಳನು ಕೂಡಿಸಿ
ಕಮನೀಯನಾಗೊಮ್ಮೆ ನೀನೆಣಿಸಿದಂತೆ, ಕರ-
ಕಮಲಸಂಜಾತ ನಾನಾಗಬೇಕೆಂದಿರುವೆ

ನೆರೆಯಾಗಿ ಮರೆಯಾಗಿ, ಕರಗಿಸುತ ಮರುಗಿಸುತ,
ಮರುಗಿಸುವೆ ಮೆರೆಯಿಸುವೆ,-ಹಂಬಲೆನಿತೋ!
ಹರಸಿ ಹಾಡುವೆ, ಕೆರಳಿನೋಡುತ್ತ ಬೆದರಿಸುವೆ,
ಚಿರದಿನಕೆ ಬಾಡದಂದದ ಧೃತಿಯ ಬೆಳೆಯಿಸುವೆ

ಕರುಣೆಯಿದ್ದನಿತುಗ್ರನಾಗಿರುವ ತಂದೆ ನೀ,
ಕರುಳಿಂದರಿತು ಹಿಸುಕಿಕೊಳುವ ತಾಯೋ!
ಸುರಗಿ ಧಾರೆಯ ನಿಯಮದಿಟ್ಟು, ಅಪರಾಧಿಯನು
ಒರೆಯ ಬೀಸುತ ಅರಿವ ತಿದ್ದುತಿಹ ಧನಿಯೋ

ಕೈನೀಡಿ ಎನ್ನೆಡೆಗೆ ನಸುನಗುತ ಬಹ ನಿನ್ನ
ಕಣ್ಣಿನಲಿ ವಾತ್ಸಲ್ಯ ತೊಳಗಿಹುದನರಿತು,
ಎನ್ನ ದೀನತೆಯಲಂಕಾರ ಮೆಚ್ಚಿದ ಕಲಾ
ಪೂರ್ಣ ನಿನ್ನಭಯಕರದೊಪ್ಪಿಸಿಕೊಳುವೆನು.

---

## ಜಿ. ಎನ್. ಲಕ್ಷ್ಮಣ ಪೈ

### ಅಮರಲೋಕ

ಭೂಮಂಡಲವನಂದು ಕತ್ತಲೆಯು ಮುಸುಕುತಿರೆ,
ಗಗನದೊಳು ಮಿಂಚು ಝಗಝಗಿಸುತಿರೆ, ಗುಡುಗು ಘುಡು
ಘುಡಿಸುತಿರೆ, ಮುಗಿಲು ಭೋರ್ಗರೆದು ಜಲಸುರಿಸುತಿರೆ,
ತವಕದಿಂ ನಾಂ ಮನೆಯ ಸೇರಿ, ಕೋಣೆಗೆ ಸಾರಿ,
ದೀಪವನು ಬೆಳಗಿ, ವಿಶ್ರಾಂತಿಯಾಸನದಲ್ಲಿ
ಕುಳಿತಿದ್ದು, ಕಣ್ಮುಚ್ಚಿ, ಸೃಷ್ಟಿವೈಚಿತ್ರ್ಯವನು
ನೆನೆಯುತ್ತಲಿರಲು ನಡೆದದ್ಭುತವನೇನೆಂಬೆ!

ಗಗನಮಂಡಲದಿಂದ ಥಳಥಳಿಪ ಬೆಳಕೊಂದು
ಬಂದು ತಾನೆನ್ನ ಕಣ್ಗಳನು ಕೋರಯಿಸುತ್ತ
ಲೆನ್ನನ್ನು ಹಿಡಿದೆತ್ತಿ, ಮಿಂಚಿನಾವೇಶದಲಿ
ಮೇಲೆ ನೆಗೆಯುತ, ಸೂರ್ಯಮಂಡಲವನಡಹಾಯ್ದು,
ಬಲು ದೂರ, ದೂರವಿಹ ನಕ್ಷತ್ರಮಂಡಲವ
ನೊಡೆಹಾಯ್ದು, ಹೊಸಲೋಕದೆಡೆಗೊಯ್ದುದತಿ ಜವದಿ!

ರಾರಾಜಿಸುತ್ತಿತ್ತು ದಿವ್ಯಲೋಕವದಹಹ!
ಅದರ ಬೆಡಗನು ಕಂಡು ಮುಗ್ಧನಾದೆನು ನಾನು!
ಸಾಂದ್ರಚಂದ್ರಿಕೆಯವೊಲು ಶಾಂತತೇಜಸ್ಸೊಂದು
ತಂಬೆಳಕಿನಿಂ ಬೆಳಗುತಿತ್ತಾ ಪ್ರದೇಶವನು;
ಎನ್ನ ಹೃದಯವು ತೋಷ, ಭೀತಿಪ್ರವಾಹಗಳ
ಸಂಗಮಸ್ಥಾನವಾಯಿತು; ಮತ್ತೆ ಧೃತಿಗೊಂಡು
ಮುಂದೆ ಹೋಗಲು ಮಧುರಸಂಗೀತದಾಲಾಪ
ವೊಂದು ಕೇಳಿಸಲದನ್ನಾರಯ್ವು ಮುನ್ನಡೆದೆ.

ಅಲ್ಲಿ 'ಮೀರಾಕೆ ಪ್ರಭು ಗಿರಿಧರಾ' ಎಂಬೊಂದು
ಹಿಂದೀ ಸುಗೀತವನ್ನಿಂಪಾಗಿ ಹಾಡುತ್ತ
ರಮಣಿಯೊರ್ವಳು ನಲಿದು ಕೃಷ್ಣನನು ಕೊಂಡಾಡು
ತಿದ್ದುದನು ನೋಡಿ ಧೈರ್ಯವನಾಂತೆ ಮನದೊಳಗೆ.

ಆ ಪುಣ್ಯವತಿಯೆಡೆಗೆ ನಡೆತಂದು, ತಲೆವಾಗಿ,
"ಹೇ ಜನನಿ! ಭರತಖಂಡದ ವಿಷ್ಣುಭಕ್ತೆಯಾ
ದೇವಿಮೀರಾಬಾಯಿ ಕೃತಿಗಳನು ಹಾಡುತಿಪ
ನೀನಾರು?—ನಾಂ ಬಂದ ಲೋಕವಾವುದು?—ಇಲ್ಲಿ
ಕನ್ನಡಿಗರಿಲ್ಲವೇ?" ಎಂದು ಕೇಳಿದೆನದಕೆ
ಕನ್ನಡಿಗರಿಹರೆಂದು ಕನ್ನಡಿಪ ತೆರದಿ ತಲೆ
ದೂಗಿ, ಕೈಸನ್ನೆಯಿಂ ಮುಂದೆ ಹೋಗೆಂದವಳು
ನಸುನಗುತ ತಿಳಿಸಲಂತಾ ದಾರಿಯಲಿ ನಡೆದೆ!

ಇದಿರಾಗಿ ದಿವ್ಯತೇಜಸ್ವಿಯೊರ್ವನು ಬಂದು
"ತಮ್ಮ ಕನ್ನಡಿಗನೇ! ಸ್ವಾಗತವು ನಿನಗೆ"ಂದು
ತಕ್ಕೈಸಿ, ಕೈಹಿಡಿದು ನಡೆದು ಪಕ್ಕದಿ ನೆರೆದ
ಸಭೆಗೆನ್ನನೊಯ್ದು ಪೀಠದ ಮೇಲೆ ಕುಳ್ಳಿರಿಸಿ,
ಸತ್ಕರಿಸಿ, ಮುಗುಳುನಗುತಿಂತು ಮಾತಾಡಿದನು:
"ಸೋದರನೆ! ಭೂಲೋಕದಿಂದ ಹೊಸತಾಗಿಲ್ಲಿ
ಬಂದ ಕಾರಣದಿಂದ ಚಕಿತನಾಗಿಹೆ ನೀನು!
ಮೋದಗೊಳ್ಳುವುದಮರಲೋಕವಿದು—ನಾಕವಿದು!
ಇಲ್ಲಿ ಕೇಳ್ ಕ್ಷುಧೆತೃಷೆಗಳಿಲ್ಲ—ತಾಪತ್ರಯದ
ಸೊಲ್ಲಿಲ್ಲ—ಜನನಮರಣಗಳಿಲ್ಲ—ರುಜೆಯಿಲ್ಲ!
ಈಶಸೇವಾಬುದ್ಧಿಯಿಂದ ಭಾಷಾಸೇವೆ
ದೇಶಸೇವೆಗಳನ್ನು ಭೂಲೋಕದಲಿ ಗೈದು
ಪೂತರಾಗಿಹ ಭಾಗ್ಯವಂತರೇ ಹೊಂದುವರು
ವಿಬುಧರಾವಾಸವಾದೀ ಪುಣ್ಯಲೋಕವನು!

"ಇರಲಿರಲಿ. ನಮ್ಮ ಚರಿತೆಯನೋದಿ ಕೇಳಿ ನೀಂ
ತಿಳಿದಿರುವೆ!—ಆದರೂ ಪ್ರತ್ಯಕ್ಷಪರಿಚಯವು
ನಿನಗಿಲ್ಲದುದರಿಂದ ನಮ್ಮ ಗುರುತಿಸಲಾರೆ!
ವೀರನಾರಣದಾಸ ನಾಂ ಕುಮಾರವ್ಯಾಸ
ನೀತನೇ ಲಾಕ್ಷಣಿಕ ನೃಪತುಂಗದೇವಕವಿ
ಯಿವನೆ ಪುಲಿಗೆರೆ ತಿರುಳ್ಗನ್ನಡದ ಕವಿಪಂಪ
ನವನೆ ಸೌಜನ್ಯಕಂದಾಂಕುರನು ಕವಿಪೊನ್ನ
ನಿಲ್ಲಿಹನು ಕವಿಚಕ್ರವರ್ತಿ ಬಿರುದಿನ ರನ್ನ
ನಲ್ಲಿ ಪಂಪಾಪತಿಯ ಭಕ್ತ ಹರಿಹರದೇವ
ನಿತ್ತ ಕವಿಭಾಳಲೋಚನ ಬಿರುದ ಜನ್ನಕವಿ
ಯತ್ತ ವೈಯಾಕರಣನದೊ ಕೇಶಿರಾಜಕವಿ
ಯಿವರೆ ನಡುಗನ್ನಡದಿ ಷಟ್ಪದದ ಝೇಂಕಾರ
ವೆಬ್ಬಿಸಿದ ರಾಘವಾಂಕಾದಿ ಕವಿಪುಂಗವರು.
ಅವರೆ ದಾಸರ ಕೂಟದವರು ಕನ್ನಡದಲ್ಲಿ
ಹಾಡುಗಬ್ಬವ ಹರಡಿ ಭಕ್ತಿರಸವೊಸರಿಸಿದ
ಕವಿಪುರಂದರ, ಕನಕದಾಸ ಮುಂತಾದವರು.
ಗದ್ಯಕಾವ್ಯವ ರಚಿಸಿ ಮುದ್ದಣನೆನಿಸಿಕೊಂಡ
ಇವನೆ ನಂದಳಿಕೆ ಲಕ್ಷ್ಮೀನಾರಣಪ್ಪಯ್ಯ
ನುಳಿದವರು ಸಾಹಿತ್ಯದೇವಿಯಾರಾಧಕರು.

"ಬಾಂಧವನೆ! ಚೆನ್ನ ಕನ್ನಡನಾಡಿನಲಿ ಮೆರೆವ
ನವಯುಗದ ಕವಿಯು ನೀನೆಂದು ನಿನ್ನನ್ನಿಲ್ಲಿ
ಬರುವಂತೆ ನಾಂ ಗೈದೆ!—ಏರ್ಪಡಿಸಿಹೆವು ನಾವು
ಭೂಮಂಡಲದ ಕನ್ನಡಿಗರು ಭಾಷಾಸೇವೆ
ಯೊಳು ಆಚರಿಪ ಕುಂದುಕೊರತೆಗಳ ಚರ್ಚಿಸುವ
ಸಾಹಿತ್ಯಗೋಷ್ಠಿ'ಯೊಂದನು!-ಅದಕೆ ನೀಂ ಸಭಾ

ಪತಿಯಾಗಬೇಕೆಂದು ಬಿನ್ನವಿಪೆನೀ ಸಭೆಯು
ಕಾರ್ಯದರ್ಶಿಯದಾಗಿ”––ಎಂದೆನಲು ಬಲು ಭೀತಿ
ತಾಳಿದೆನು! ನಡುಗಿದೆನು!!—ಕವಿಪುಂಗವರ ಸಂಗ
ವಿದು ನನ್ನ ಮಾನಭಂಗಕ್ಕೆ ಸಂಘಟಿಸಿತೇ—
ಎಂದು ಹಂಬಲಿಸುತ್ತ ಮನದೊಳಗೆ ಮರುಗಿದೆನು.

ಹೀಗಿದ್ದರೂ ಧರಣಿಮಂಡಲದ ಗೌರವವ
ಬಿಡಲಾಗದೆಂದು ಧೈರ್ಯವ ತಂದುಕೊಂಡು ನಾಂ
ಮೆಲ್ಲನಿಯೊಳೆಂದೆ: “ಕವಿವರ! ಕವಿಗಳೀ ಸಭೆಯೊ
ಳಧ್ಯಕ್ಷಪೀಠವೇರುವ ಘನತೆಯೆನಗಿಲ್ಲ!
ಆದರೂ ಬಲು ಮನ್ನಣೆಯಲಿ ನೀನರ್ಪಿಸುವ
ಗೌರವವನೊಲ್ಲೆನೆನ್ನುವ ಸಾಸವೆನಗಿಲ್ಲ!
ನಿನ್ನ ಸರಳತೆ, ನಿರಭಿಮಾನಗಳಿಗೀ ನಡತೆ
ಚೆನ್ನು!” ಎನೆ ನಾರಣಪ್ಪನು ಹಸ್ತಲಾಘವವ
ನಿತ್ತು ನಾನಗ್ರಾಸನವ ವಹಿಸಬೇಕೆಂದು
ಬಹಿರಂಗದಲಿ ಸೂಚನೆಯನು ತರಲೊಡನೆ ಕವಿ
ರನ್ನನನುಮೋದಿಸಲು, ಸಭಿಕರೆಲ್ಲರು ತಮ್ಮ
ಸಮ್ಮತಿಯ ಸೂಚಿಸಲು ಕರತಾಡನದೊಳಾಗ
ಹಿರಿತನದ ಗದ್ದುಗೆಯನೇರಿದೆನು ಘನತೆಯಲಿ.

ಕವಿಗಳಿಗೆ ರಾಜಮಾರ್ಗವನೊರೆದು ಕವಿರಾಜ
ಕರ್ಣಾಟರಾಜರೊಳು ಕವಿಯಾಗಿ ರಾಜಕವಿ
ನೃಪತುಂಗನಿಂತೆಂದ: “ಕಾವೇರಿಯಿಂದಮಾ
ಗೋದಾವರಿವರಮಿರ್ದತಿ ವಿಶಾಲತೆಯಾಂತ
ಕರ್ಣಾಟದೇಶವದು ಛಿನ್ನಭಿನ್ನತೆಯಾಂತು
ರೂಪವನು ಕಳೆದುಕೊಂಡಿರುವುದಿದು ಸೊಗಸಲ್ಲ!”

ಎನಲೆಂದೆ: "ನೃಪತುಂಗದೇವ! ನಿನ್ನೀ ಮಾತು
ನಿಜ! ಮೊನ್ನೆ ಕೊಂಗ್ರೆಸ್ಸಿನವರು ಸರಕಾರದಾ
ಅಧಿಕಾರ ಹೊಂದಿಹರು! ದೇಶಹಿತದೃಷ್ಟಿಯಿಂ
ದವರೀಗ ಕರ್ಣಾಟಕೈಕೀಕರಣವನ್ನು
ಸಾಧಿಸಲು ಚಿಂತಿಸುತ್ತಿರುವರಿದು ಶುಭಚಿಹ್ನೆ!"

ಒಡನೆಯೇ ಆದಿಪಂಪನು ನುಡಿದನೀತೆರದಿ:
"ಕನ್ನಡಂ ಕತ್ತುರಿಯುದಲ್ತೆ!— ಇಂತಿರ್ದೊಡಂ
ಮನ್ನಿಸುತಾಂಗ್ಲಭಾಷೆಯನೆ ತಿಳಿಗನ್ನಡಕೆ
ಬನ್ನಮಂ ತಾವೆ ಗೈದರ್ ಕೆಲರ್— ಕೆಲರಿನ್ನು
ಮುನ್ನತಿಯನೆಸಗಿದಪೆವೆಂದು ಸಲ್ಲದ ನಡೆಯು
ನುನ್ನೈಸಿ ಪೊಸತಾಂಗ್ಲಭಾವನೆಯಿದೆನ್ನುತ್ತೆ
ಕನ್ನಡದ ಮುನ್ನಡೆಯ ಕಿಡಿಸಿದರ್ ಪೊಡವಿಯುವ
ರನ್ನೆಯುಮಿದನ್ನೆಯುಂ!"

ರನ್ನಕವಿಯಿಂತೆಂದ:
"ಸಾಲೆಯುಲಿ ಸಕ್ಕದವ ಕಲಿಯಲೇಬೇಕೆಂಬ
ನಿರ್ಬಂಧವಿಹುದುಚಿತ!— ಕೆಲ ಕನ್ನಡಿಗರಿಂದು
ಸಂಸ್ಕೃತಿಯ ಹೊಂದದಳಿಗಬ್ಬಂಗಳನು ರಚಿಸಿ
ವೃದ್ಧಿಯನು ಕೆಡಿಸುವರು!"

ಜನ್ನಕವಿಯಿಂತೆಂದ:
"ಹಿಂದೆ ಭೂತಳದಿ ಕನ್ನಡದ ಸಸಿ ಬೆಳೆವಂತೆ
ಗೈದ ಕೀರ್ತಿಯು ಜೈನಕವಿಗಳಿಗೆ ಸಲ್ವುದೈ!
ಇಂದು ಜೈನರದೇಕೆ ಹಿಂದುಳಿದಿಹರೊ— ಕಾಣೆ!"
ವೈಯಾಕರಣ ಕೇಶಿರಾಜನಿಂತೆಂದ"ನಹ!
ಪಳಗನ್ನಡದ ಶಬ್ದಮಣಿದರ್ಪಣವನಂದು
ಬರೆದೊಡಂ ನಾಂ ಪೇಳ್ದ ಸೂತ್ರಂಗಳಂ ವಿಚಾರಿ
ಧರಣಿಯೊಳ್ ಮಾನಿಸರ್ ನಡೆವರಿದು ವಿಹಿತಮೋಂ?"

ಕವಿರಾಘವಾಂಕನಿಂತೊರೆದ: "ಬರಿಸಗಳೆಂಟು
ನೂರಾಗಲಾಯ್ತೆಂದು ನುಡಿವ-ಬರೆಯುವ ಭಾಷೆ
ಗಳ ಬೆರಸಿ ಮಿಶ್ರಕನ್ನಡನುಡಿಯು ರೂಪಿಸಿದೆ!
ಷಟ್ಪದಿಯ ಛಂದಸ್ಸಿನಲಿ ಸರಳಶೈಲಿಯಲಿ
ರಚಿಸಿ ಕಾವ್ಯವ ರಸಿಕರನು ಮುಗ್ಧಗೊಳಿಪೆನ್ನ
ರೀತಿಯನೆ ಮುಂದಿನವರನಿಬರನುಕರಿಸಿಹರು."

ಕವಿಕುಮಾರವ್ಯಾಸನೆಂದ "ನೀ ರಾಘವಾಂ
ಕನು ಸುಧಾರಕನಹುದು! ಷಟ್ಪದಿಯ ಕಾವ್ಯಗಳು
ಜನತೆಯಲಿ ಮೆಚ್ಚನ್ನು ಪಡೆದಿಹವು—ಪಡೆಯುವುವು!
ಭಾಷೆಯಾ ಸರಳತೆಗೆ, ವಿಷಯದಾ ರಸಿಕತೆಗೆ
ಮನಸೋತು ನನ್ನ ದಶಪರ್ವಭಾರತವನ್ನು
ಕನ್ನಡಿಗರೆಲ್ಲರಾಮೋದದಿಂ ಪಠಿಸುವರ
ದೆಂಬ ವಿಷಯವನರಿತು, ಸಂತೋಷವಾಂತಿಹೆನು."

ಕವಿಪುರಂದರದಾಸರಿಂತೆಂದು ಹೇಳಿದರು:
"ದಾಸಕೂಟದ ನಾವು ಕನ್ನಡದ ಮಾತಿನೊಳೆ
ನೂರಾರು ಭಕ್ತಿಗೀತಗಳನ್ನು ಬರೆದಿರಲು,
ಕೆಲ ಕನ್ನಡಿಗರಿಂದು ತಾಯ್ನುಡಿಯನೊಲ್ಲದಲೆ
'ಅಟ್ನಾಪಿಸೇ ಯುಗೇ ವಿಟಿವಾರಿ ಉಭ' ಎಂದು
ಮುಂತಾಗಿ ಹಾಡುತ್ತಲನ್ಯಭಾಷಾಸಕ್ತಿ
ಯನ್ನು ಹೆಚ್ಚಾಗಿ ತೋರುವರೇಕೊ ನಾಂ ಕಾಣೆ!"

ಬಳಿಕ ಕವಿಮುದ್ದಣನು ತಾನಿಂತು ಹೇಳಿದನು:
"ಹಳಗನ್ನಡವದಿರಲಿ—ಹೊಸಗನ್ನಡವದಿರಲಿ—
ಪದ್ಯವಾಗಿರಲಿ ಮೇಣ್ ಮೃದುಗದ್ಯವಾಗಿರಲಿ
'ವಾಕ್ಯಂ ರಸಾತ್ಮಕಂ ಕಾವ್ಯಮೆ'ನ್ನುವ ವಚನ
ವದು ಸಿದ್ಧ. ಶಬ್ದಗಳನೆಳೆತಂದು ಜೋಡಿಸುತೆ

ಪ್ರಾಸಯುತವಾಗಿ ಬರೆಯಲು ಕಾವ್ಯವಲ್ಲವದು!
ಸೊಗಸಾದ ಮಾತಿನಲಿ ಕವಿ ತನ್ನ ಭಾವವನು
ತೋರಸೂಸಿ ರಸಿಕರೆದೆಯನ್ನು ತಣಿಸಿದರದುವೆ
ಸತ್ಕಾವ್ಯವೆಂದೆನಿಸಿ ಬಹುಕಾಲ ಬಾಳುವುದು."

ಬಳಿಕ ಯಾರೂ ಮಾತನಾಡಲಿಕ್ಕೇಳದಿರ
ಲಾ ಸಭಾಪತಿಯಾದ ನಾನೆದ್ದು ನುಡಿದೆ"ನೆಲೆ
ಕವಿಪುಂಗವರೆ! ನಿಮ್ಮ ಸಾಹಿತ್ಯಚರ್ಚೆಯಲಿ
ಹುರುಳುಂಟು—ತಿರುಳುಂಟು!—ಆಕ್ಷೇಪಗಳಲಿಯೂ
ಸಾರವಿದೆ—ಸಂಸ್ಕೃತಿಯ ಭಾರವಿದೆ! ಆದರೂ
ಎನ್ನಂತರಂಗವನು ಹೇಳದಿರಲಧ್ಯಕ್ಷ
ತನದ ಗೌರವವನ್ನು ಲಘುಪಡಿಸಿಕೊಂಡಂತೆ!

"ಪಂಪಕವಿ ನುಡಿದಂತೆ ಆಂಗ್ಲಭಾಷಾಮೋಹ
ದಿಂದ ಕನ್ನಡವ ಕೀಳ್ಗೈವ ಕೆಲ ಕನ್ನಡಿಗ
ರಿರುವರಭಿಮಾನಶೂನ್ಯತೆಯು ಹಿತವಲ್ಲ!

"ರನ್ನ ಕವಿ ಹೇಳ್ದಂತೆ ಸಾಲೆಯಲಿ ಸಕ್ಕದವ
ಕಲಿಯಲೇಬೇಕೆಂಬ ನಿಯಮವಿಹುದುಚಿತವದು!

"ಜನ್ನಕವಿಯೊರೆದಂತೆ ಜಿನಮತದ ಬಾಂಧವರು
ಪೂರ್ವಜರ ಸಂಸ್ಕೃತಿಯ ನೀಗಿ ಸಾಹಿತ್ಯಸೇ
ವೆಯನೆಸಗದಲೆ ಬಾಳ್ವ ನಡತೆಯದು ತರವಲ್ಲ!—

"ಕವಿಕೇಶಿರಾಜನಾಕ್ಷೇಪವದು ಸರಿಯಲ್ಲ!—
ಕಾಲಾನುಗುಣದಿಂದ ಕನ್ನಡದ ರೂಪ ಬದ
ಲಾಗಿ ಹಳಗನ್ನಡದ ನಿಯಮಗಳು ಹೊಂದದಿವೆ!
ಹೊಸಗನ್ನಡಕ್ಕೊಂದು ಹೊಸನಿಯಮವನು ರಚಿಸಿ.
ನುಡಿಯ ರೂಪಿಸುವ ವೈಯಾಕರಣನುದಯಿಸಲಿ!

"ಹಳೆ ಸಂಪ್ರದಾಯವಾದಿಗಳ ಟೀಕೆಯು ಸಹಿಸಿ
ಹೊಸನುಡಿಯೊಳೊಸೆದು ಷಟ್ಪದಕಾವ್ಯ ಹೊಸೆದದನು
ಪಸರಿಸಿದ ಜಸವು ಕವಿರಾಘವಾಂಕನಿಗಹುದು!

"ಕವಿಕುಮಾರವ್ಯಾಸನತಿಸರಳಕವಿಯಹುದು!–
ಮಧುರಪದ, ಹಿತಭಾವ, ಮೆರೆವಲಂಕೃತಿಯಿಂದ
ಕನ್ನಡದ ನುಡಿವೆಣ್ಣನೊಲಿಯಿಸುವ ನಲಿಯಿಸುವ
ಕಲೆಯುವನೊಳಿದೆ! ಹಿರಿದು ಸಾಹಿತ್ಯಲಾಭವದು
ಸಾಮಾನ್ಯ ಜನರಿಗೂ ಲಭಿಸಲೆನ್ನುತ ಬಗೆದು
ಕಾಲಾನುಗುಣವಾದ ಹೊಸಗನ್ನಡದೊಳವನು
ಭಾಮಿನಿಯ ಹಜ್ಜೆಯಲಿ, ಸವಿನುಡಿಯ ಗೆಜ್ಜೆಯಲಿ,
ಭಾರತವ ಕುಣಿಸಿ ನಗಿಸಿದ ಕಜ್ಜವದು ನುತ್ಯ!

"ಆದರಾ ಭಾರತವು ಸಕಲಜನಸನ್ನುತವ
ದೆಂಬ ಹೆಗ್ಗಳಿಕೆಯದು ಸರಿಯಲ್ಲ!—ಮಡಿಕೇರಿ
ಸಾಹಿತ್ಯಸಮ್ಮೇಳನದ ಸಮಯದಲ್ಲಿ ಪಂ
ಡಿತರೊರ್ವರೀ ತೆರದಿ ತೆಗಳಿಕೆಯ ಮಾಡಿಹರು:
'ಹಲಗೆ ಬಳಹವ ಪಿಡಿಯದಗ್ಗಳಿಕೆ--ಪದವಿಟ್ಟು
ಅಳುಪದಗ್ಗಳಿಕೆಯಿಂ ಬರೆದ ಕಬ್ಬವ ತಾನು
ತಿದ್ದಿಕೊಳ್ಳದೆ ಕಾವ್ಯಲಕ್ಷಣವ ಮೀರಿ ದಶ
ಪರ್ವಭಾರತವೊರೆದ ಕವಿಕುಮಾರವ್ಯಾಸ
ನಾ ಕಾಲದಿಂದ ಕಬ್ಬದ ಕಬ್ಬು ಸಿಹಿಯಿಲ್ಲ!'
ಇರಲಿರಲಿ. ಲೋಕದಲಿ ಮತಭೇದವಿರುವುದಿದು
ಸ್ವಾಭಾವಿಕವಿದಲ್ತೆ!

"ಭಾಗವತರಾ ಪುರಂ-
ದರದಾಸರುಸುರಿದಾಕ್ಷೇಪವದು ಸಹಜವೈ!
ಕರ್ಣಾಟಕೀರ್ತನೆಗಳನ್ನು ಕಡೆಗಣಿಸುತ್ತ
ಲನ್ಯಭಾಷೆಯ ಗೀತಗಳ ಮೋಹಿಸುವುದಹಿತ!!

“ಮುದ್ದಣಕವಿಯ ವಚನವತಿಶಯೋಕ್ತಿಯದಲ್ಲ!
ಮುದ್ದಾಗಿ ರಾಮಾಶ್ವಮೇಧ ಕಥೆಯನ್ನವನು
ಗದ್ಯಕಾವ್ಯದಿ ಬರೆದು ರಸಸಿದ್ಧಕವಿಯಹನು!

“ಭಾವನೆಯ ಮುಗುಳುಗಳು ಮಾತಿನಲರುಗಳಾಗಿ
ಸುಮನಸರಿಗಾಮೋದವೆಸಗೆ ಸತ್ಕಾವ್ಯವದು!

ಹಳತು ಹೊಸತೆಂಬ ಭೇದವಮಾಳ್ಪುದನುಚಿತವು!
ಪ್ರಗತಿಯು ನಿಸರ್ಗಲಕ್ಷಣವಲ್ತೆ! ಕಾಲಪ್ರ-
ವಾಹದಲಿ ಬದಲಾವಣೆಗಳಾಗುವುದು ಸಹಜ
ವನಿವಾರ್ಯವದರಿಂದ ಹಳೆಯ ಸಂಸ್ಕೃತಿಯನ್ನು
ಕಾಪಾಡಿ ಹೊಸತನ್ನು ಕೂಡಿ ನಲಿಯುವುದೆ ತಾಂ
ಕಾಲಧರ್ಮವು!—ಅದುವೆ ಜಸಕೆ ಕಾರಣವಲ್ತೆ!
ಕನ್ನಡದ ಮಾತೆಯನು ನುತಿಸಿ, ಸೇವಿಸಿ, ಜಗದಿ
ಸೊಗದಿ ಬಾಳ್ವುದೆ ನಮ್ಮ ಗುರಿ-ಧರ್ಮ-ಸತ್ಕರ್ಮ!”

ಎನಲಾಗ ಗುಡುಗೊಂದು ಘರ್ಜಿಸಲು, ವಿಸ್ಮಯದೊ
ಳೆಚ್ಚತ್ತು ಕಣ್ದೆರೆದು ನೋಡುತಿರಲಿದಿರಿನಲಿ
ದೀಪ ಮಿಣುಕುತಲಿತ್ತು! ನಾನಿದ್ದೆನಾಸನದಿ!!
ನಾಂ ಕಂಡ ಕಡುವಿಭವದಮರಲೋಕವದೆನ್ನ
ಕನಸಿನುದ್ಯಾನದೊಳಗಿನ ಕುಸುಮವೆಂದರಿತೆ!

---

## ನೆಲ್ಲಿಕಾಯಿ ಸುಂದರಮ್ಮ

### ದೇವರ ನಾಮಗಳು

**ರಾಗ ನಾಟಿ—ಆದಿತಾಳ**

ಪರಿಪಾಲಿಸೈ ಮುನ್ನ । ಪರದೈವವೆನ್ನ ।
ಸುರಮುನಿಸೇವಿತ । ಕಾರುಣ್ಯಪೂರಿತ ॥ ಪಲ್ಲವಿ ॥

ನಂಬಿದೆ ನಿನ್ನಯ । ಚರಣಾಂಬುಜವನ್ನು ।
ಕಾಂಬುವೆನೆಂದಿಗೆ । ಶಂಬರಾರಿಪಿತ

ಆನತಜನಸುರ । ಧೇನುವೆ ಭಜಿಪರ ।
ಮಾನಸದೊಳಗಿದ್ದು । ಸಾನುರಾಗದಿ ಪೊರೆ

ಪಂಕಜನೇತ್ರನೆ । ಸಂಕಟಹರಣನೆ ।
ಶಂಕೆಯಿಲ್ಲದೆ ಬಂದು । ವೆಂಕಟೇಶನೆ ಪೊರೆ

II

**ಇಂಗ್ಲಿಷ್ ನೋಟ್—ಏಕ ತಾಳ. (ಮಧ್ಯಮ ಕಾಲದಲ್ಲಿ ಹೇಳಬೇಕು.)**

ಓಡುತ ಓಡುತ ಬಾ । ನಲಿದಾಡುತ ಬೇಗದಿ ಬಾ ॥
ಆಡುತ ಪಾಡುತ । ಕೂಡುತ ಬಾಲರ । ಬೇಡುತ ಬೆಣ್ಣೆಯನು ॥ ಪ ॥

ನಂದನ ಕಂದನೆ ಬಾ । ಮುಚು । ಕುಂದವರದನೆ ಬಾ ॥
ಇಂದಿರೆಯುರಸನೆ । ಮಂದರಧರ ಅರ । ವಿಂದನಯನನೆ ಬಾ

ಫಾಲದಿ ಗುರುಳೆ ಬಾ । ನೀಲವರ್ಣ ಬಾ ॥
ಬಾಲೆಯರ ಮನ । ಸೋಲಿಸಿದಂಥಾ । ಬಾಲಕೃಷ್ಣಾ ಬಾ

ಕಸ್ತೂರಿಫಾಲ । ತಿಲ । ಕಾಂಕಿತಯದುಬಾಲ ॥
ಶ್ರೀವತ್ಸಲಾಂಛನ । ಕೌಸ್ತುಭಾಭರಣ । ವತ್ಸ ಗೋಪಾಲಾ

ಗೊಲ್ಲತೀಯರೊಳ್ । ಗುಲ್ಲನೆ ಗೈಯುತ್ತಾ ॥
ಬಿಲ್ಲನೆ ಮುರಿದು । ಖುಲ್ಲರ ತರಿದ । ಬಲ್ಲಿದನೆ ನೀ ಬಾ

ಶಂಖಚಕ್ರಗಳ । ಅತಿ । ಬಿಂಕದಿ ಧರಿಸಿರುವ ॥
ಕುಂಕುಮಾಂಕಿತ । ಪಂಕಜಲೋಚನ । ವೆಂಕಟರಮಣನೆ ಬಾ

## III

ರಾಗ ಬಾಗೆಶ್ರಿ—ರೂಪಕ ತಾಳ

(ಮಾರ ತನಮ್ಮ ಮನಮ್ಮ ಎಂಬಂತೆ)

ರನ್ನ ನೀ ಬಾರೆಲೊ । ಚಿನ್ನ ನೀ ಬಾರೆಲೊ ।
ಯನ್ನ ಭಾಗ್ಯದ ನಿಧಿ । ನೀ ಬಾರೊ ॥ ಪ ॥

ಬಿನ್ನಾಣದಿಂದಲಿ । ಬಂಣಿಸಿ ಗೋಪ್ಯೆರು ॥
ನಿನ್ನ ಕರೆವರಲ್ಲಿ ಪೋಗದಿರೊ ॥ ಅನು ॥

ಪೊಳೆವ ಕಪೋಲದಿ । ಕರ್ಣಕುಂಡಲ ಪ್ರಭೆ ।
ಸುಳಿಗುರುಳೊಪ್ಪುತ । ಸೊಬಗಿನಿಂದ ॥
ಹುಲಿ ಉಗುರರಳೆಲೆ । ಮಾಗಾಯಿ ಹೊಳೆಯುತ ।
ಎಳೆ ತುಳಸೀವನಮಾಲೆಯೂ

ಪಂಕಜಾನನ ನವಪಂಕಜದಳನೇತ್ರ ।
ಪಂಕಜನಾಭ । ಪರಿಪಾಹಿ ॥
ಕಂಕಣಕೇಯೂರ । ವಂಕಿಭಾಪುರಿಹಾರಾ ।
ಲಂಕಾರಶೋಭಿತ ಶ್ರೀಧರ

ಸಿರಿಮುಡಿಯಲಿ । ಪಾರಿಜಾತವ ಮುಡಿಯುತ್ತ ।
ತರಳರನೊಡಗೊಂಡು । ಹರುಷದಿಂದ ॥
ದುರುಳತನದಿಂದ । ಗೋಪೇರೊಸ್ತ್ರವನಪ ।
ಹರಿಸಿದ ಶ್ರೀಕೃಷ್ಣ ಬಾರೆಲೊ

ಪಾಲುಗಲ್ಲಾವದು । ಲಾಲಾಮುಯುವತಿ ।
ಲೀಲೆಯಿಂ ನುಡಿಯುತ । ತೊದಲ್ನುಡಿಯ ॥
ಶ್ರೀಲೋಲ ಪಾಲಿಸು । ಮೇಲಾದ ವರವಿತ್ತು ।
ನೀಲವರ್ಣನೆ ವೆಂಕಟೇಶನೆ

## IV

ರಾಗ ಅಠಾಣ—ತಾಳ ರೂಪಕ

ಘನಮಹಿಮ । ಗಾನಲೋಲ । ಸನಕಾದಿ ಮೌನಿಪಾಲ ॥ ಪಲ್ಲ ॥

ಅನವರತನತಜನಾಶ್ರಿತ । ನವನೀರದ ಶ್ಯಾಮಲಾಂಗ ।
ಶುಭಾಂಗ ರಿಪುಮದಭಂಗ ॥ ಅನುಪಲ್ಲವಿ ॥

ಮಂದರೋದ್ಧರ ಮಧುಮರ್ದನ । ಮಂದದನುಜ
ಕುಲಹನನ । ಇಂದಿರಾಧವ ಪರಮಪಾವನ ।
ಗೋವಿಂದ ಆನಂದ ವ್ರಜಜನ । ವೃಂದವಂದಿತಪದ ॥

ಅಣುರೇಣುತೃಣ(ಪರಿ)ಪೂರ್ಣ । ಪ್ರಣವರೂಪ ಪರಮ ಪುರುಷ ।
ಗುಣಮನೋಜ್ಞ ಕೌಸ್ತುಭಾಭರಣ । ವನಜೋದ್ಭವ ಭವ ।
ಸುರಗಣವಂದಿತ ಸರಸಿಜಚರಣ ॥

ವೇದವೇದ್ಯ ವೇಣುವಾದನ । ನಾದಬ್ರಹ್ಮಸ್ವರೂಪ । ಆದಿಮೂಲ
ಅಪ್ರಮೇಯ । ಶ್ರೀಶ ಜಗದೀಶ ಶ್ರೀ ವೆಂಕಟೇಶದಾಸವಿನುತಪದ ॥

## V

ರಾಗ— ಹಿಂದುಸ್ಥಾನಿ. ಭೈರವಿ.

ಪೊರೆಯ ಬೇಕೈ ಶ್ರೀಹರಿ
ಮರೆಯ ಪೊಕ್ಕ ಯೆನ್ನಾ ಧೊರೆ ॥ ಪ ॥

ಘೋರತರವಾದ ಸಂ । ಸಾರಶರಧಿಯಿಂದ ।
ಪಾರಗಾಣದೆ ಬಂದಿಹೆ............

ಕಂದನ ನುಡಿ ಕೇಳಿ । ಅಂದು ಕಂಬದಿ ಬಂದು ।
ತಂದೆ ಪೊರೆದವ ನೀನಲ್ಲವೆ............

ತಂದೆತಾಯಿಯು ನೀನೆ । ಯೆಂದು ನಂಬಿದೆ ನಿನ್ನ
ಮಂದಭಾಗ್ಯಳಾದೆನ್ನನು........ ...

ಏತಕೆ ನಿರ್ದಯ । ಖ್ಯಾತ ನೀನೆನ್ನಯ
ಮಾತ ಲಾಲಿಸಿ ಪೊರೆಯೈ............

ಕಂತು ಪಿತನೆ ಯನ್ನ । ಅಂತರಂಗದೊಳಿದ್ದು
ಸ್ವಾಂತವನಿತ್ತು ಯನ್ನ ನೀ...........
ಶ್ರೀಶವೆಂಕಟೇಶನೆ ದಾಸಳಾದೆನ್ನನೆ
ವಾಸವನುತ ದಯದಿ..... ... ...

## VI

### ರಾಗ—ಪೀಲು

ಕಾಯ್ಯೊ ಶ್ರೀಕೃಷ್ಣ । ತೋಯಜಾಕ್ಷನೆ ನೀ ॥
ಮಾಯೆಯೊಳಗೆ ಬಿದ್ದು । ಆಯಾಸಗೊಂಡಿಹೇ ॥ ಪಲ್ಲವಿ ॥
ನೊಂದೆನೊ ಈ ಭವ । ಬಂಧನದೊಳು ಸಿಲುಕಿ ॥
ಮುಂದು ಕಾಣದೆ ದೇವ । ಬಂದು ನೀ ಸಲಹೈಯ್ಯಾ
ಕರಿ ಮಕರಿಗೆ ಸಿಲುಕಿ । ಒರಲುತ್ತಲಿರುವಾಗ ॥
ಪೊರೆದವನಲ್ಲವೆ । ಮರೆವರೆ ಯನ್ನ ನೀ
ಆರಿಗೆ ಮೊರೆಯಿಡ । ಲಿ । ನ್ನಾರೆನಗೆ ಹಿತವರು
ದಾರಿ ತೋರೆಲೊ ದೇವ । ವಾರಿಜನಾಭನೆ
ನಿನ್ನ ನಾಮಾಮೃತ । ವನ್ನು ಯನಗೀಯುತ ॥
ಘನ್ನ ಮಹಿಮ ಸತತ । ಪನ್ನಗಾಚಲವಾಸ
ಗಿರಿಯನಿವಾಸನೆ । ವರವೆಂಕಟೇಶನೆ ॥
ಚರಣ ಪೊಕ್ಕೆನು ನಿನ್ನ । ಮುರವೈರಿ ಪೊರೆಯೆನ್ನ

## VII

### ರಾಗ—ಬಿಹಾಗ್ ಬಾಲಲೀಲೆ

ಬಾರೊ ಬೇಗ ಬಾರೊ ಬಾ ಬಾ ಬಾ ಉಲ್ಲಾಸದಿ ॥ ಪಲ್ಲವಿ ॥
ಪುಟ್ಟ ಪುಟ್ಟ ಕೈಯ್ಯ । ಬೆಟ್ಟ ಬಾಯಲ್ಲಿಟ್ಟು
ಬೆಟ್ಟವನೆತ್ತಿದನೆ । ಧಿಟ್ಟನೆ । ಬೆಟ್ಟವನೆತ್ತಿದನೆ ॥
ಚೆನ್ನಿಕೋಲು ಚೆಂಡು । ಬಣ್ಣದ ಬುಗುರಿಯು ।
ಚಿನ್ನಾರೊಡನಾಡುತ । ಪಾಡುತ । ಚಿನ್ನಾರೊಡನಾಡುತ ॥
ವರಗಿರಿವಾಸನೆ । ಸಿರಿವೆಂಕಟೇಶನೆ ।
ಪೊರೆವುದೆಮ್ಮನೂ ಸದಾ । ವರದಾ । ಪೊರೆವುದೆಮ್ಮ ಸದಾ ॥

## VIII

ರಾಗ—ಕಮುವರ್ಧಿನಿ

ಪಾಹಿ ಪಾಹಿ ಪಾಹಿ ಜಗದಾಧಾರ ಪಾಹಿ ಮಾಂ ॥ ಪಲ್ಲವಿ ॥

ನೊಂದೆನ್ನೆಯ್ಯಾ ನಿಂದೆಯಿಂದ । ಬಂಧನವ ಬಿಡಿಸೆನ್ನಯ್ಯಾ
ಸಂದರುಶನವಿತ್ತುಯನಗೆ । ನಂದನಂದನ............
ಗತಿಯುದಾರೊ ನಿನ್ನ ಹೊರತು । ರತಿಪತಿಪಿತ ಸತತ ಯನಗೆ
ಹಿತವರನ್ಯರ ಕಾಣೆನಯ್ಯ । ಪತಿತಪಾವನ............
ಚರಣಪೊಕ್ಕೆ ಕರುಣದಿಂದ । ಸಿರಿರಮಣ ಕರುಣ ಭರಣ
ಗಿರಿನಿವಾಸ ವೆಂಕಟೇಶ । ಪರಮಪಾವನ ॥............

## IX

## ಲಕ್ಷ್ಮೀಸ್ತುತಿ

ರಾಗ—ನಾಟಕುರಂಜಿ

ಬಾರೆ ನೀರಜಾಲಯೆ ಮಾಂ ಕಲಯೆ ॥ ಪಲ್ಲವಿ ॥

ಸಾರಸಾಕ್ಷಿಯೆ ಸುರ । ನಾರೀರಿಂದಲಿ ಕೈ
ವಾರಾಗೊಳುತ್ತಲಿ । ಭೂರೀ ಕೃಪಾಕರೆ ॥
ಅಂಬುಜಮಂದಿರೆ । ಕಂಬುಸುಕಂಧರೆ ।
ಬಿಂಬಾಧರಿಯೆ ಜಗ । ದಂಬಾ ನೀ ಕರುಣದಿ
ಕರ್ಣಕುಂಡಲ ಸು । ವರ್ಣಮುಕುಟಧರೆ
ಸ್ವರ್ಣಧಾರೆ ದೇವಿ । ಪೂರ್ಣೇಂದು ಸೋದರಿ
ಕಿಂಕರಾಳಿಗೆ ತವ । ಪಂಕಜಪಾದವ
ಶಂಕೆಯಿಲ್ಲದೀಯೆ । ವೆಂಕಟೇಶಪ್ರಿಯೆ

## ಎಮ್. ಸುಬ್ರಾಯನ್

### ೧ ಕಲ್ಲು

ಜನರೆಲ್ಲ ಮಾಡುತಿಹ ಕರ್ಮಗಳನರಿದರಿದು,
ಮನದಲ್ಲಿ ಮೌನತೆಯು ತಳೆದಿದ್ದು, ನೆಲೆನಿಂದು,
ಕನಸಿನಲಿ ಕಂಡಿರುವ ಧನಗಳಿಗೆ ಗೋಣಿಯನು
ನೆನೆದಲ್ಲಿಗೆಳೆವಂತೆ ಲೋಕಕರಿಸುವೆಯ, ನೀ?
ನಿನಗಿಲ್ಲ ಲೋಕದಲಿ ಸಮನಾದ ಘನಮಹಿಮ,
ನಿನಗಿಲ್ಲ ಲೋಕದಲಿ ಎಣೆಯಾದ ಜನತಾಣ,
ನಿನಗಿಲ್ಲ ಲೋಕದಲಿ ವ್ಯವಹರಿಸೆ ಪರಿವಾಣ,
ನಿನಗಿಲ್ಲ ಲೋಕದಲಿ ಜೀವಿಯಂತಹ ಪಯಣ.
ನಯಶಾಲಿ ನಿಂದಡಿಯ ತೆಗೆದಿರಿಸನೆಂಬುದನು
ಭಯಶಾಲಿ ರಕ್ಕಸನು ಮನದಲ್ಲಿ ತಾನರಿದು,
ಭಯದಿಂದಲೋಡುವನೊ ನೀನಿದ್ದ ನೆಲೆ ಬಿಟ್ಟು?
ಕೊಯಕವನು ನಾನೊರೆಯೆ, ನೀನೆನಗೆ ನಿಜವನೊರೆ!
ನೆರೆ ಬಿಸಿಲೊಳೇತಕ್ಕೆ ಪರಿತಪಿಸುವೆಯೊ, ಪೇಳ!
ಅರಿತೆನದನಿರುಳೆಲ್ಲ ಕಾದಿರುತಲಾನೊಬ್ಬ,
ಬರಿದೇಕೆ, ಪಗಲೀಗಳಲ್ಕಿದರ ರಕ್ಷೆಯೊಳು
ತರುಣಿಯನು ದಾಯವಾದಿಯ ಮಾಳ್ಪೆನೆಂದೆನುತ!
ಮಳೆಗಾಳಿ ಜಡಿಯುತಿರೆ ನಿನಗಿಲ್ಲ ಕಿನಿಸಿನಿಸು,
ಚಳಿಗಾಲಕಿಲ್ಲ ಮೈಮುಚ್ಚಲ್ಕರಿವೆ ಚಿಂದಿ!
ತಿಳಿವೊಡದು ನಿನಗೆಂತ ಸಂಕಟವೊ, ಲೋಕದಲಿ
ಅಳುವವರ ನಾ ಕಾಣೆನಿದು ಲೋಕಪದ್ಧತಿಯು!
ಕಲ್ಲೆನಿಸಿ ಜನುಮವನು ತಳೆದಿದ್ದು ಗುಣವುಂಟೆ?
ಕಲ್ಲನ್ನು ಕುರಿತೊಂದು ಕೇಳಿರುವೆ, ರಾಮನದು
ಕಲ್ಲೆನಿಸಿ ನಿಂದಿರುವ ಸತಿಯನ್ನು ಕಂಡಿರುವ
ಕಾಲವದು ಬಂದಾಗ ಗುಣವುಂಟು ಎಲ್ಲದಕು!

ಬಯಕೆಯನು ಕೊನೆಗೊಳಿಸಿ ನಿಂದಿರುವೆ ನೀನೀಗ,
ಬಯಕೆಯನು ಕೊನರಿಡಿಸಿ ನಿಂದಿರುವೆ ನಾನೀಗ,
ಬಯಕೆಯದು ಜೀವಿಗಳನೊರೆದರಿವ ಕಲ್ಲೀಗ!
ಬಯಕೆಯನು ಸೃಷ್ಟಿಸಿಹ ಬಿದಿಯೆರ್ದೆಯೆಂತಿಹುದೊ!
ಪಗೆ ಪಡೆಯು ಬಂದಾಗ ರಕ್ಷಕನು ನೀನಪ್ಪೆ,
ಪಗೆ ಪಡೆಗೆ ನೀನೆಂತ ಬೆದರಿಕೆಯ ಕೊಡುತಿರ್ಪೆ,
ಬಗೆಯಲದು ಕಾಯದಲಿ ಬಲವಂತನೆನಿಸಿರ್ಪೆ,
ಬಗೆಯಲದು ಕಾಯವೇ ಸಾಧನವು ಎಲ್ಲದಕೆ!
ಪಳಿಯಲದು ಪೇಳುವರು ಕಲ್ಲೆದೆಯ ನೀನೆಂದು;
ಪಳಿವರಿಗೆ ಮತಿಯುಂಟೆ? ತಿಳಿದಲ್ಲ ಪೇಳುವುದು!
ಕಳೆದಿರುವ ಮಡದಿಯನು ಮಡಿವಳನ ಮಾತಿನಲಿ!
ಮುಳಿಸಲ್ತೆ ಮಾಡಿಪುದು ನಿನಗೇನನಿದರಿಂದೆ?
ಸಂತಸದ ಕಾಲವನು ಕಳೆಯಲ್ಕೆ ನಿನ್ನಲ್ಲಿ
ಸಂತೆಯನು ಕೂಡುತ್ತೆ, ತಮ್ಮೊಳಗೆಯಂತೊರೆವೆ
ಯಿಂತೊರೆದೆಯೆಂದೆಂಬ ನಂಜನುಡಿ ಕಿವಿಗುಡಿದು
ಇಂತಪ್ಪ ನೆಲೆ ಬಂತೆ? ಲೋಕ ನಂಜಿನ ಬಿತ್ತು!
ಲೋಕದಲಿ ನುಡಿಯುತಿಹ ನುಡಿಗಿನಿತು ಪುರುಳುಂಟೆ?
ಬೇಕು ಬೇಕೆನುತ ನುಡಿದಿರುವ ನುಡಿ ಕೇಳಿರುವೆ.
ಸಾಕಬ್ಬ ತಾಗಿತದು ಕಲ್ಲೆನಗೆಯೆಂದೆಂಬ
ಈ ಕುರಿತು ಪೇಳಲದು ಮಾಡಿದಗೆ ತಪ್ಪಿಲ್ಲ!
ಗಡಿಯಲ್ಲಿ ನಿಂದಾಗ ನಿನಗೊಂದು ಪೆಸರಕ್ಕು,
ಗುಡಿಯಲ್ಲಿ ನಿಂದಾಗ ಬೇರೊಂದು ಪೆಸರಕ್ಕು,
ಪಡಿಯಲ್ಲಿ ನಿಂದಾಗ ಮತ್ತೊಂದು ಪೆಸರಕ್ಕು,
ದಿಡನರಿದೆ ಕಾರಣಂ, ಪೆಸರಿಂಗೆ ನೆಲೆಯಕ್ಕು!
ದೇಗುಲದಿ ಪೂಜಿಸುವ ಮೂರ್ತಿಯದು ನೀನೀಗ
ಬಾಗುತ್ತೆ ನಿಂದಿರುವೆ ನಿನ್ನಲ್ಲಿ ನಾನೀಗ
ಆಗಮದ ವಚನಗಳ ಮೀರುವುದು ಸರಿಯಲ್ಲ!
ಆಗಮವನಲ್ಲ ನಿನ್ನಂ ಕುರಿತು ಬರೆದೆನಿದ!

## ೨ ಆ ನೋಟ

ಮನದಲ್ಲಿ ತುಂಬಿರುವ ಭಾವನೆಯ ಪೊರಸೂಸಿ
ಜನಮನವ ಸೆಳೆಯುತಿಹ ಮಾಯಿಗನ ನಾಟ್ಯವನು
ಕೊನೆಗಣ್ಣ ಕುಣಿತದಿಂ ತೋರುತಿರಲಾಂ ಕಾಂಬೆ ಬಗೆ
ಯೊಂದ ನಿನ್ನಚ್ಚಿಯೊಳ್
ಅನಿಮಿಷರು ವಾರಿಧಿಯ ಮಥಿಸಲ್ಕೆ ಪೊರ್ದಿರ್ಪ
ಯಿನಿದಮರ್ದ ಹಾಲಾಹಲವ ಮುಂದೊಗೆದ ಸುರೆಯು
ಮುನಿಯದಿರು ಬೆಳ್ಪಿಹುದು ಕರ್ಪಿಹುದು ಸಾಟಿಯಿಂ
ಕಾಣಲಾರಾಗಮಿಹುದು

ತುರುಗಿರುವ ಪೀಯೂಷದೆಡೆಯಲ್ಲಿಯಾನಂದ
ಮೆರೆಯುತಿದೆ, ನಂಜಿರುವ ತಾಣದಲಿ ಮರಣವಾ
ದೊರೆತನವು ಕಾಣುತಿದೆ, ಸುರೆಯಿರ್ಪ ನೆಲೆಯಲ್ಲಿ
ಪೊಣ್ಮುತಿದೆ ಮುದದ ಕೊರ್ವು
ಬರಿದೆಂತು ನಾ ಕರೆವೆ ಏಣಾಕ್ಷಿ ನೀನೆಂದು
ಸರಿಯಲ್ಲ ಕಬ್ಬಿಗರ ಭಾವನೆಯ ಸೃಷ್ಟಿಯಲಿ
ತಿರುಗುತಿರಲೆನಗಿಂತು ಕಂಡತ್ತು ನೀನಿದಂ
ಮನ್ನಿಪೆಯ ಸಚ್ಚಮೆಂದು

## "ಜೈನಮುಹಿಳೆ"

### ೧ ಗೊಮ್ಮಟಜಿನ

ಅರರೇ ನಿನ್ನ ತಪಕ್ಕೆ ಪಾಸಟಿಯೆ ಮೇಣ್ ನಿನ್ನೊಂದು ವೈರಾಗ್ಯಕೆ
ಸರಿಯೇ ನಿನ್ನ ದೃಢಕ್ಕೆ ಧೈರ್ಯಕೆ ಮಹಾತ್ಯಾಗಕ್ಕೆಮೀ ಲೋಕದೊಳ್
ಧೊರೆಯಾಗಿರ್ದೊಡುಮೆಲ್ಲವಂ ತೃಣಮೆನುತ್ತಾ ರಾಜ್ಯಭೋಗಂಗಳಂ
ತೊರೆದಿಲ್ಲೀ ಗಿರಿಯಗ್ರದೊಳ್ ನಿಲಲು ನೀನೇಂ ಚಾಗಿಯೋ ಗೊಮ್ಮಟಾ

ಗುಡುಗಿಂಗಂಜದೆ ಮಿಂಚು ಮಿಂಚಲದಕುಂ ನೀಂ ಬೆಚ್ಚದೇ ಧೈರ್ಯದೊಳ್
ಒಡನಾ ಪೇರ್ಮಳೆ ಸೋರುತಿರ್ದೊಡದಕುಂ ಅತ್ತಿತ್ತಲಲ್ಲಾಡದೇ
ಕಡುವಿಂ ಬೀಸುವ ಗಾಳಿಗುಂ ನಡುಗದೇ ನೀನಾವ ಸಾಮರ್ಥ್ಯದಿಂ
ನಿಡುಗಲ್ಲೊಳ್ ದೃಢವಾಗಿ ನಿಂದಿರುವೆಯಾ ನಾಂ ಬಲ್ಲೆನೇಂ ಗೊಮ್ಮಟಾ

ಒಡಲಂ ದಂಡಿಸಿ ಕರ್ಮವಂ ಕೆಡಿಸಿ ಬಲ್ಮೋಹಾದ್ರಿಯಂ ಚೂರ್ಣಿಸೀ
ಝಡಿದಾ ಅಂತಕರಾಜನಂ ಜಯಿಸಿ ನೀಂ ಪಾಪಾರಿಯಂ ಭಂಜಿಸೀ
ಬಿಡದಾ ಮುಕ್ತಿಯ ರಾಜ್ಯವಂ ಪಡೆವಗೀ ತಾಪಂಗಳೇಂ ಗಣ್ಯಮೇ
ತಡವೇಕೀ ಬಡಜೀವಿಯಂ ಪೊರೆವುದೈ ನೀನೊಲ್ಪಿನಿಂ ಗೊಮ್ಮಟಾ

### ೨ ದೇಶವಾಡಿಕೆ

ಕಡಲೆಯ ಗಿಡಗಳ ಮುಡಿಲೊಳಗಿರಿಸಿ ।
ಎಡಗೈಯಲಿ ಗಿಡವೊಂದನು ಧರಿಸಿ ।
ಅಡಿಗಡಿಗಾಕಾಳ್ಗಳ ಬಾಯ್ಗುಣಿಸಿ ।
ನಡೆತಹಳೀ ಬಾಲೆ ।

ಮೊಳದಷ್ಟಂಚಿನ ಶೀರೆಯನುಟ್ಟು ।
ಮೊಳಕೈವರೆಗಿನ ಕುಪ್ಪಸ ತೊಟ್ಟು ।
ಘಳಿರೆನೆ ಕೈತುಂಬಾ ಬಳೆ ತೊಟ್ಟು ।
ಬಹಳೋರ್ವಳು ಮುಗುದೆ ।

ಅರಿಸಿನ ಕುಂಕುಮದಿಂ ಸಿಂಗರಿಸಿ ।
ಕುರುಳನು ಬಾಚುತ ಜಡೆಯನು ಹೆಣೆಸಿ ।
ಬರೆವಳು ರಂಗೋಲೆಯನೋರ್ವ ಬಲೆ ।
ಹೊಸ್ತಿಲ ಬಳಿಯಲ್ಲಿ ।

ನಡುವಿಗೆ ಹೊಳೆವಾ ಪಟ್ಟಿಯನಿಟ್ಟು ।
ಎಡಕಂಕುಳಲೀ ಗಡಿಗೆಯನಿಟ್ಟು ।
ನಡೆತಹಳೋರ್ವಳು ದೇವೀ ಕೆರೆಗೆ ।
ನೀರಿಗೆ ನಲ್ಮೆಯಲಿ ।

## ೩ ಆಶೆ

ಆಶೆ! ನಿನ್ನ ಬಲೆಗೆ ಬಿದ್ದು । ಮೋಸಹೋಗದವರು ವಿರಳ ।
ದಾಸರಾಗಿ ಹೊರಳುತಿಹರು ಜನರು ಬಳಿಯಲಿ,—
ನಿನ್ನ ಚರಣತಲದಲಿ ॥
ಲಕ್ಷಕೋಟಿ ಜೀವಿಗಳನು । ಭಿಕ್ಷೆ ಬೇಡುವಂತೆ ಗೈವೆ;—
ಲಕ್ಷಕೋಟಿ ಜನರ ಮಾನ ಪ್ರಾಣ ಹರಿಸುವೆ,—
ಸೆರೆಯ ಮನೆಯ ಹೊಗಿಸುವೆ ॥

ನಿನ್ನ ಮಾಯೆಯೆಂಬ ಪರದೆ । ಕಣ್ಣಿಗಿಕ್ಕಿ ಪ್ರಾಣಿಗಳನು ।
ನಿನ್ನ ವಶವ ಮಾಡಿಕೊಳುವೆ ಮಾಯಗಾತಿಯೆ!—
ಕಪಟ ನಟನೆ ತೋರುವೆ ॥
ಇರುವೆಯಿಂದ ಕರಿಯ ವರೆಗು । ಕುರುಡನಿಂದ ದೊರೆಯ ವರೆಗು ।
ಉರುಲನಿಕ್ಕಿ ಗಾಸಿಗೊಳಿಪ ನಿನ್ನ ಬಲುಮೆಯೆ!—
ಅಮಮ,—ನಿನ್ನ ಮಹಿಮೆಯೇ! ॥

ಮನವ ಕಲಕಿ ಇಂದ್ರಿಯಗಳ । ಕ್ಷಣದಿ ನಿನ್ನ ಬಳಿಗೆ ಸೆಳೆದು ।
ಕುಣಿಸುತಿರುವೆ ಸನ್ನೆಯಿಂದ, ನಿನ್ನ ಸತ್ವವೆ!—
ನಿನ್ನೊಳಿಹ ಮಹತ್ವವೆ! ॥
ನಾಳೆ ಸಾಯಲಿರ್ಪವನಿಗು । ಬಾಳ್ವೆಯೆಂದು ಪೇಳುತಿರುವೆ ।
ಕಾಲನೊಯ್ಯುತಿರಲು ಕಂಡು ದೂರ ನಿಲ್ಲುವೆ,—
ವಿಕಟಹಾಸಗೆಯ್ಯುವೆ ॥

ಆಶೆಯಿಂದ ಹುಟ್ಟು ಸಾವು, ದ್ವೇಷರಾಗಮೋಹ ಸ್ವಾರ್ಥ ।
ಆಶೆಯಿಲ್ಲದಿರಲು ರೋಗರುಜೆಗಳಿಲ್ಲವು,—
ಜನನ-ಮರಣವಿಲ್ಲವು ॥
ಆಶೆ! ನೀನು ಸುತ್ತುತಿರುವ । ಪಾಶಗಳನು ಹರಿವ ಬಲವ ।
ಲೇಸಿನಿಂದಲಿತ್ತು ಪೊರೆಯಲೆನ್ನ ದೇವನು!—
ಅವನ ಧ್ಯಾನಗೈವೆನು ॥

## ೪ ಸಂಧ್ಯಾಕಾಲ

ಸಂಧ್ಯಾಕಾಲದಿ ಬಾಡುತ ಕಾಣದೆ ರವಿಯೇ, ಪೋಗುವೆಯಾ? ।
ಮುಂದಿಗೆ ನಿಮ್ಮಯ ಬಾಳುವೆಯಿಸಿತೇ ಎಂಬುದ ಸಾರುವೆಯಾ? ॥
ಕಂಜಸಖನು ತಾ ಕಾಣದೆ ಪೋಗಲು, ಹಕ್ಕಿಗಳೇ! ನೀವು ॥
ಮಂಜುಳರಾಗದೊಳೇನನು ಪೇಳುತ ಗೂಡನು ಸೇರುವುದು? ॥
ಕೇಳು ಮನುಜ ತವ ಜೀವನವೆಂಬುವ ಹೊತ್ತಗೆಯಿಂದೊಂದು ।
ಹಾಳೆ ಮುಗುಚಿತದೊ ತಿಳಿದಿರುಯೆನ್ನುತ ಸಾರುವಿರೇ ನೀವು? ॥
ಇಂದಿನ ಕೆಲಸವ ನಾಳೆಗಿಡದೆ ನೀನಿಂದೇ ಮುಗಿಸೆನುತ, ।
ಸಂದಿತು ನಿನ್ನಾಯುಷ್ಯದೊಳೊಂದಿನವೆಂಬ ನೆನಹ ಕೊಡುತ, ॥
ತರತರದಾ ಕ್ರಿಮಿಕೀಟಗಳೇ, ನೀವ್ ಪರಿಪರಿಭಾಷೆಯಲಿ ।
ಮರೆಯದಿರೆನ್ನುತ ಮನವನು ಕರ್ತವ್ಯದ ಕಡೆಗೆಳೆಯುವಿರೇ. ॥

## ೫ ಬಾಹುಬಲಿ ಜಿನದೇವ

ಗರ್ವ ನಿನಗಿನಿಸಿಲ್ಲ ಹೃದಯದೊಳಗಾದೊಡೆಯು ।
ಗರುವಿಕೆಯ ಗಂಡು ನೀನೇ ಜಗಕೆ ಅಲ್ಲದೊಡೆ ।
ಸರ್ವಮೃಗಪಕ್ಷಿಫಟಸರ್ಪಂಗಳಿಂ ನಿಬಿಡಮಾಗಿರ್ದ ಕಾಂತಾರದೊಳ್ ॥
ಓರ್ವನೇ ನಿಂತು ಬಿಸಿಲಿನ ಬೇಗೆಯಂ ತಡೆದು ।
ಗಾರುಗೊಳಿಸುವ ಕ್ಷುಧಾತೃಷೆಗಳನ್ನೊತ್ತಿಟ್ಟು ।
ಚಾರುತಪದಿಂ ಮುಕ್ತಿಕನ್ಯೆಯನ್ನೊಲಿಸುವೆಯು, ಬಾಹುಬಲಿಜಿನದೇವನೆ? ॥

ಅರರೆ ಮನ್ಮಥನೆಂಬ ಅನ್ವರ್ಥಕನುಸರಿಸಿ ।
ಭರದಿ ನಿನ್ನನು ನೀನೆ ಗೆಲಿದ ಶೂರಾಗ್ರಣಿಯೆ ।
ಧರೆಯನೊಂದೇ ಕೊಡೆಯೊಳಾಳ್ವ ಚಕ್ರಾಧಿಪನ ಕಿರಿಯ ಸೋದರ
ನಾಗಿಯು ॥

ತೊರೆದಿಷ್ಟಭೋಗಾದಿ ರಾಜ್ಯಗಳ ತೃಣಗಂಡು ।
ಗಿರಿಯಗ್ರದೊಳು ನಿಂದು ಕಡು ಕಠಿನತಪವಾಂತು ।
ಸ್ಥಿರಮುಕ್ತಿಸಾಮ್ರಾಜ್ಯವಂ ಸೂರೆಗೊಂಡೆ ಶ್ರೀ ಬಾಹುಬಲಿ ಜೀನದೇವನೆ ॥

ಆವಾವ ಜನ್ಮದೊಳು ಆವಾವ ರೂಪಿನಿಂ ।
ಭಾವಿಸಲ್ಕಸದಳದ ಬವಣೆ ಬಟ್ಟೆನು ದೇವ ।
ಪಾವನಾಂಗನೆ ನಿನ್ನ ಪಾದಪದ್ಮವನಿಂದು ಕಂಡು ನಾಂ ಧನ್ಯಳಾದೆ ॥
ಭಾವಜಾರಿಯೆ ಮುಕ್ತಿದೇವಿಗೊಡೆಯನೆ ಎನ್ನ ।
ಕಾವುದೀ ಭವಜಲಧಿಯಿಂದೆತ್ತಿ ಕರುಣದಲಿ ।
ಭಾವಶುದ್ಧದಿ ಬೇಡುವೆನು ನೀನೆ ಶರಣು ಶ್ರೀ ಬಾಹುಬಲಿ ಜಿನದೇವನೆ. ॥

## ಪುಂಡೂರು
## ಲಕ್ಷ್ಮೀನಾರಾಯಣ ಪುಣಿಂಚತ್ತಾಯ

### ೧ ಭಾರತರಾಣೀ

ಧಾಟಿ:—(ಮೂರ್ತಿಮಂತ ಭಿ:ಿ ಉಭೀ) ಅಥವಾ (ಶ್ರೀ ಮಹಾತ್ಮಗಾಂಧಿ ನಮೋ)

ಮಾತೃಭೂಮಿ ಶ್ರೀಧರಣಿ । ರಾಣಿ ಭುವನಮೋಹಿನಿ ॥ ಪ ॥
ಮಾತೃ ಸಕಲ ಸುಗುಣಭೂಷಣೇ । ಕ್ಷೋಣಿ ಲೋಕನಂದಿನಿ ॥ ಅ. ಪ. ॥

ರಾಜಹಂಸ ರಾಜಿತಾಂಬರ । ಶ್ವೇತಚ್ಛತ್ರ ಶೋಭಿತೇ ।
ಭ್ರಾಜಮಾನ ಹಿಮಗಿರೀಂದ್ರ । ಮಣಿಕಿರೀಟ ಭೂಷಿತೇ ॥

ವಂದ್ಯಕಾಶ್ಮೀ । ರಾಂಬುಜಾನನೇ । ಧರ್ಮಕರ್ಮಲೋಚನೇ ।
ಸಿಂಧುಗಂಗಾಸ್ತನ್ಯೇ ಮಾನ್ಯೇ । ಸತ್ಯಶಾಂತಿಕರಯುಗೇ ॥

ಅಸಮುಕ್ಷಮಾ । ಕವಚಲಸಿತೇ । ವಿಂಧ್ಯಗಿರಿ ಸಿಂಹಾಸನೇ ।
ವಸುಮತೀ ರತ್ನಾಕರಾಶ್ರಯೇ । ಕಲ್ಪಭೂಜಕೇತನೇ ॥

ಪೂರ್ವಪಶ್ಚಿಮ । ಶೈಲಚರಣೇ । ಸೇತುಪಾದುಕಾಸ್ಥಿತೇ ।
ಗರ್ವಿ ಸಿಂಹಳೇಂದ್ರಮುಕುಟ । ಮೌಕ್ತಿಕಾಂಘ್ರಿವಿಲಸಿತೇ ॥

ಬಂಧುರೇಧರೇ! । ಚಮರಿ ಚಾಮರೇ । ಸಸ್ಯಮಯ ಪೀತಾಂಬರೇ ।
ಹಿಂದುಸಾಗರ ವಂದಿಮಾಗಧೇ । ಕೀರಕೋಕಿಲಗಾಯಕೇ ॥

ಕಮಲ ಕೋಮಲ ದಂಡಧಾರಿಣಿ । ಮಲಯಗಂಧ ಮೋದಿನಿ ।
ಅಮಲ ಸಲಿಲ ಫಲ ಸುಮಾನಿಲ । ಸಕಲ ಕಲಾನಂದಿನಿ ॥

ಚಾರುಕ್ಷೇತ್ರೆ ಗೋತ್ರದುರ್ಗೇ । ಭವನ ವನ ಮನೋಹರೇ ।
ಶೂರ— ಸೂತ— ಸಾಧು— ಸಾಧ್ವೀ । ಮಂದಿರೇ! ವಸುಂಧರೇ! ॥

ಹಿಂದು, ಮುಸಲಮಾನ, ಜೈನ, । ಬೌದ್ಧ, ಸೀಖ, ಫಾರಸೀ ।
ಬಂಧು ಕ್ರೈಸ್ತ ಲೋಕಜನನಿ । ಕರಿತುರಂಗವಾಹಿನಿ ॥

ಘೂರ್ಖ, ಸೀಖ, ರಾಜಪುತ್ರ । ವಂಗವರ ವರೂಥಿನಿ ।
ಭೀಕರೇ! ಕರ್ಣಾಟ, ತೆಲುಗ, । ಭಟಮರಾಟ ವಾಹಿನಿ ॥
ಸರ್ವಭುವನವಿನುತೇ ವಿಮಲೇ । ವಿನತರಾಜಮಂಡಲೇ ।
ಸಾರ್ವಭೌಮ ಭವ್ಯವಿಭವೇ । ಜಯತು ಸರ್ವಮಂಗಲೇ ॥

## ೨ ಮಾಯಾಲೀಲೆ

ದಾಟಿ: –(ಕರುಣಾಕರ ನೀನೆಂಬುವದ್ಯಾಕೊ)

ನರಕೇಸರಿಯೇ । ನಿನ್ನಯ ಮಾಯಾ ।
ಚರಿತೆಯ ನಾನರಿಯೆ ॥ ಪ ॥
ಅರಿಯದೆ ನಿಜವಾ । ಕುರಿಯಂತಿಹೆ! ದೇವ ।
ಪರಮ ಪುರುಷ ನಿನ್ನ । ಪರಿಯನು ತಿಳಿಸಯ್ಯ ॥ ಅ. ಪ. ॥

ಉರಗಶಯನನಾಗಿ— । ಗರುಡಗಮನನಂತೆ ।
ಶರಧಿಯಳಿಯನಾಗಿ— । ಮಾವನಂತೆ ॥
ವರ ಭೋಗಿಯಾಗಿ—ಯೋಗಿ । ಮಾನಸಹಂಸನಂತೆ ।
ಶರಣಾನುರಾಗಿಯಾಗಿ— । ವಿರಾಗಿಯಂತೆ ॥

ಅಣುಮಾತ್ರನಾಗಿ—ಹೊಟ್ಟೆ । ಯೊಳಗೆ ಬ್ರಹ್ಮಾಂಡವಂತೆ ।
ಘನ ವಿಶ್ವರೂಪನಾಗಿ— । 'ಕಾಣೆ'ಯಂತೆ ॥
ಗುಣಗಣಮಣಿಯಾಗಿ— । ನಿತ್ಯನಿರ್ಗುಣನಂತೆ ॥
ನೆನೆದರೆ ನಿನಗೊಂದೂ । ನೆಲೆಯಿಲ್ಲವಂತೆ ॥

ಭೂಧವನಾಗಿ ನೀನು । ನೆಲವ ಬೇಡಿದೆಯಂತೆ ।
ಶ್ರೀಧರನಾಗಿ—ಭಿಕ್ಷು । ಸಖನಂತೆ ॥
ವೇದಗೋಚರನಾಗಿ— । ನೀನಗೋಚರನಂತೆ ।
ಭೇದರಹಿತ—ಪಂಕ್ತಿ । ಭೇದಕನಂತೆ ॥

ಕಮಲಬಾಂಧವತೇಜ, । ಕಮಲದಳಾಕ್ಷನೆ, ।
ಕಮಲನಾಭನೆ, ಕಮ । ಲಾವರನೆ, ॥
ಸುಮಶರಜನಕನೆ, । ಸುಮನಸರೊಡೆಯನೆ, ।
ಸುಮಕೋಮಲನಾಗಿ— । ಬಹುಬಲನಂತೆ ॥

ಮಾಯೆ ನಿನ್ನೊಳಗಂತೆ- । ನೀ ಮಾಯೆಯೊಳಗಂತೆ ।
ಶ್ರೀಯು ನಿನ್ನೊಳು- । ನೀನು ಶ್ರೀಯೊಳಂತೆ ॥
ಜೀಯ! 'ಕುಸುಮ ಗಂಧ' । 'ವೃಕ್ಷ-ಬೀಜ'ಗಳಂತೆ ।
ಮಾಯಾಪ್ರಪಂಚದೊಳು । ತವ ಬಂಧವಂತೆ ॥

ಅನಿಮಿಷವರನಾಗಿ— । ಮೀನಾಗಿ ನಿಂತೆಯಂತೆ ।
ಘನ ವಿಶ್ವಂಭರನಾಗಿ— ಮಣ್ಣ ಹೊತ್ತೆ ॥
ವನಚರ ಹಂದಿಯಾಗಿ— । ನರಮೃಗವಾದೆಯಂತೆ ।
ನಿನಗೆ 'ಕಾಲಕ್ಕೆ ತಕ್ಕ । ಕೋಲ'ಗಳಂತೆ ॥

ಹುಟ್ಟು ಜನ್ಮವ ಬಿಟ್ಟು । ಶರಣಗೆ ಮೋಸ ಕೊಟ್ಟು ।
ಹುಟ್ಟುತಾಯನೆ ಕೊಂದು, । ಸತಿಯು ಬಿಟ್ಟು, ॥
ದಿಟ್ಟ ಗೋವಳನಾಗಿ, । ಶ್ರೇಷ್ಠ ಸತಿಯರನ್ನು
ಭ್ರಷ್ಟರಾಗಿಸಿ ನಿಂತೆ । ಅಂತಕನಂತೆ ॥

ಮರೆಸಿ ವಾಲಿಯು ಕೊಂದೆ । ಶಬರಿಯೆಂಜಲ ತಿಂದೆ ।
ಕರಡಿ ಮಂಗಗಳೊಂದಿ । ಗಲೆದು ನಿಂದೆ ॥
ಕರುಣಾಭರಿತನಾಗಿ— । ಲೋಕಾಪವಾದಕಾಗಿ ।
ತರುಣಿ 'ಗರ್ಭಿಣಿ'ಯನು । ಕಾಡಿಗೋಡಿಸಿದೆ ॥

ಇಳೆಗೆ ನೀತಿಯ ಬೋಧಿ । ಸುವ— ನಿನ್ನ— ಭೂಸತಿ ।
ಹಲವು ಭೂಪತಿಗಳ । ಸತಿಯಂತೆ ॥
ಬಳಿಯೊಳರ್ಧಾಂಗಿಯಾದ । ಚಂಚಲೆ ಶ್ರೀಸತಿ ।
ಗಳಿಗೆಗೊಬ್ಬೊಬ್ಬನಿ । ಗೊಲಿಯುವಳಂತೆ ॥

ಕ್ಷೀರವಾರಿಧಿಯೊಳ । ಮಲಗಿಕೊಂಡವನಾಗಿ— ।
ನಾರಿಗೋಪಿಯರನ್ನು । ವಂಚಿಸುತ ॥
ಕ್ಷೀರವನೊಯ್ದು ತಂದು । ಬೆಣ್ಣೆಯ ಕದ್ದು ತಿಂದು ।
ಜಾರನು—ಚೋರನೆಂದು । ಹೇಳಿಸಿಕೊಂಡೆ ॥

ಆಟ ಗೋವಳರಲ್ಲಿ । ನೋಟ ಗೋಪಿಯರಲ್ಲಿ ।
ಪಾಟ ಬೈರಾಗಿಗಳ । ಪೀಠದಲ್ಲಿ ॥
ಊಟ ಕೌರವರಲ್ಲಿ । ಕೂಟ ಪಾಂಡವರಲ್ಲಿ ।
ನಾಟಕ ನಿನ್ನದು । ನೋಟಕೊಳ್ಳೆಯದು ॥

## ೩ ಭವಲೀಲೆ

ಭವನಾಟಕವ । ಮಾಡಿದ ದೇವ ।
ಭವಭಯ ಪರಿ । ಹರಿಸೊ ॥ ಪ. ॥
ನವನವ ಕಥೆಯಾ । ಭವರಂಗದ ಮಾಯಾ ।
ಭವನ—ಭುವನದಲ್ಲಿ । ಭವಿಸುವಂತೆಸಗುವ ॥ ಅ. ಪ. ॥

ತರತರದಲಿ ನರ । ಗೊಂಬೆಗಳನು ಮಾಡಿ ।
ಪರಿಪರಿಯೊಳಗವು । ಗಳ ಕುಣಿಸಿ ॥
ಮೆರೆಸಿ—ಮರಸಿ, ಮಾಯಾ । ರಂಗದೊಳಾಡುವ ।
ಧರೆಯ ನಾಟಕ ಸೂತ್ರ । ಧಾರಿ! ಮುರಾರಿ! ॥

ರಕ್ತಮಾಂಸಗಳಿಂದ । ಮಲಮೂತ್ರಕೋಶದಿಂದ ।
ಯುಕ್ತವಾಗಿಹ—ವಾತ । ಪಿತ್ಥ—ಕಫದ ॥
ಅಸ್ಥಿಪಂಜರವನು । ಚರ್ಮಕವಚದಿಂದ ।
ಸುತ್ತಿ ಚೇತನವಿತ್ತು । ಕುಣಿಸಿ ದಣಿಸುವ ॥

ನಿಖಿಲಾಂತರ್ಯಾಕೆ । ಸಾಕ್ಷಿಸ್ವರೂಪನೆ ।
ವಿಕಳಮತಿಗಳನು । ಪ್ರೇರಿಸುತ ॥
ಸಕಲಾನರ್ಥದ । ಕಥೆಗಳನಾಡಿಸಿ ।
ಸುಖದಿ ನೋಡುವ ನಿನ್ನ । ಲೀಲೆಯ್ಗು ಸರಿಯೆ? ॥

ಉಂಡು, ಮಲಗಿ, ಮಲ, । ಮೂತ್ರವ ಮಾಡಿಕೊಂಡು ।
ಗಂಡಹೆಂಡತಿ ಮರಿಮಕ್ಕಳಿಂದು ॥
ಅಂಡಲೆಯುತ ಗೇಣು । ಹೊಟ್ಟೆಯ ಪಾಡಿಗಾಗಿ ।
ಗುಂಡಿಗೆ ಹೆದರದೆ । ಹೊಡೆದಾಡುತಿರುವ ॥

ಹರಿಗಳು—ಕರಿಗಳ, । ಹುಲಿಗಳು—ದನಗಳ ।
ಗರುಡನುರಗಗಳ । ಕೊಲುವಂತೆ ॥
ನರರು—ನರರ ಘೋರ । ಹಿಂಸೆಗೆ ಹೇಸದ ।
ಪರಿಯಲಿ ಪ್ರಕೃತಿಯು । ನೋಟವನೆಸಗಿ ॥

ಘೋರ ಮಾಯಾರಂಗ । ದೊಳು ನರನಾಟವ ।
ನಾರಿಹೃದಯದಂತೆ— । ಸಿರಿಯಂತೆ— ॥
ನೀರಿನ ಗುಳ್ಳೆಯಂತೆ— । ತೆರೆಯಂತೆ—ಮಿಂಚಿನಂತೆ ।
ತೋರಿ—ಯಡಗುವಂತೆ । ನಡೆಸುವೆಯಂತೆ ॥

ಧನ ವಸುಂಧರೆಯಲ್ಲಿ । ದನವು ಗೋಶಾಲೆಯಲ್ಲಿ ।
ವನಿತೆಯು ಬಾಗಿಲಲ್ಲಿ । ಮಾನವನ ॥
ತನುಜರು ಬಂಧುಗಳು । ಘೋರ ಸ್ಮಶಾನದಲ್ಲಿ ।
ತನುವದು ಚಿತೆಯಲ್ಲಿ । ತೊರೆವಂತೆ ವಿಧಿಸಿ ॥

## ೪ ದಾನಲೀಲೆ

ಪರಮೋದಾರಿ! । ಶೋಕನಿವಾರಿ! ।
ಪೂರಿ ಕರುಣಾ । ಲಹರಿ! ॥
ಗರುಡಗಮನ ಶ್ರೀ । ವರ ಕುಂಜವಿಹಾರಿ! ।
ದುರಿತಹರಣ! ಹರಿ! । ವರದ! ವಿಠಲ! ಶೌರಿ! ॥ ಅ. ಪ. ॥

ಹರನಿಗೆ ದಯವನು, । ವಿಧಿಗೊಂದು ವಿಧಿಯನು, ।
ಸುರಪಗೆ ಭೋಗವನು । ನಾಕವನು ॥
ಸ್ಮರನಿಗೆ ರೂಪವನು, । ನರಗೆ ಪ್ರತಾಪವನು, ।
ಭರದೊಳೊದಗಿಸಿದ । ವರದಾನಂದ ॥

ಅನುಪನು ಯುಮುನಿಗೆ । ದಂಡಾಧಿಕಾರವನು, ।
ಧನಪನಿಗಗಣಿತ । ಧನವನ್ನು ॥
ಅನಲಗೆ ಜ್ವಾಲೆಯುನ್ನು । ಅನಿಲಗೆ ವೇಗವನ್ನು ।
ಗಣಪತಿಗಾದಿ ಪೂಜೆ । ಯುನ್ನು ಪಾಲಿಸಿದ ॥

ಧರಣಿಗೆ ಕ್ಷಮೆಯುನ್ನು । ತರಣಿಗೆ ತೇಜವನ್ನು ।
ವರ ಹಿಮುಕರನಿಗೆ । ಕಳೆಯನ್ನು ।
ಶರಧಿಗೆ ನಿರವಧಿ । ಗಂಭೀರತೆಯುನು, ।
ಕರುಣಿಸಿ ಮೆರೆವಾ । ಕರುಣಾವಿಭವ ॥

ರಾಗವ ಕೋಗಿಲೆಗೆ । ಭೋಗವರಗಿಳಿಗೆ, ।
ಯೋಗವನೆಣೆವಕ್ಕಿ । ಗಳ ಕುಲಕೆ, ॥
ಸೋಗೆಯು ನವಿಲಿಗೆ, । ನಡೆಯುನು ಹಂಸೆಗೆ, ।
ಭಾಗ್ಯವ ಗರುಡಗೆ ದಯುಪಾಲಿಸಿದ ॥

ನೇತ್ರವ ಹರಿಣಿಗೆ, । ಕಟಿಯುನು ಕೇಸರಿಗೆ, ।
ಗಾತ್ರ ಗಭೀರತೆಯು । ವ್ಯಾಘ್ರನಿಗೆ, ॥
ತಂತ್ರವ ನರಿಗಿತ್ತು, । ಕರವನು ಕರಿಗಿತ್ತು, ।
ಚಿತ್ರಗತಿಗಳನು । ತುರಗನಿಗಿತ್ತ. ॥

ತಂಪನು ಚಂದನಕೆ । ಸಂದ ಮುಂದಾನಿಲಗೆ, ।
ಸೊಂಪನು ಸಂಪಿಗೆ । ಮುಲ್ಲಿಗೆಗೆ ॥
ಇಂಪನು ಗಾಯುನಕೆ, । ಝೇಂಕಾರ ತುಂಬಿಗೆ, ।
ಕಂಪನು ಕಸ್ತೂರಿಗೆ । ಕೊಟ್ಟು ಶೋಭಿಸುವ ॥

ಆಧಾರವಿಲ್ಲದೆ । ಹಾರುವ ಪಕ್ಷಿಗಳಿ ।
ಗಾಧಾರನಾಗಿ ನಡೆ । ಯಿಸುತಿರುವ ॥
ಊರ್ಧ್ವಗತಿಯು ಗಾಳಿ । ಯಾಧಾರವಿಲ್ಲದ ।
ವಾರ್ಧಿಯೊಳಗೆ ಮೀನು । ಗಳ ಬದುಕಿಸುವ ॥

ಜನನಿಯ ಜಠರದ । ಪಿಂಡಕೆ ತಿಂಡಿಯು ।
ಬನದೆ ನಿದ್ರಿಸುವಜ । ಗರಗನ್ನವ, ॥
ಘನ ಕವಚದ ಯೊಳ । ನೀರಿಗೆ ಜಲವ, ।
ವನಜದೊಳಗೆ ಮುಕ । ರಂದವ ಸುರಿವ ॥

ಕಡಲಡಿಯಲ್ಲಿ ಮುತ್ತು । ಗಳನುಂಟುಮಾಡುವ,
ಜಡಧಿಯ ತಡೆಗಟ್ಟಿ । ಬಂಧಿಸಿರುವ, ॥
ಉಡುಗಳನೆತ್ತಿಹಿಡಿ । ಯುವ ಕರವುಳ್ಳವ ।
ಹಿಡಿದು ಗಗನವನು । ತಡೆದು ನಿಲ್ಲಿಸುವ ॥

ಮದ್ದಿನ ಗುಣವನು । ಕಾಡುಸೊಪ್ಪುಗಳಲ್ಲಿ ।
ಮುದ್ದು ನುಡಿಯ ಸವಿ । ಕಂದರಲ್ಲಿ ॥
ಉದ್ದ ಸರಿಗೆಯಲಿ । ಗಾನ ಮಾಧುರ್ಯವ, ।
ಶುದ್ಧ ಕಲ್ಲಲ್ಲಿ ವಜ್ರ । ತೇಜವನೀವ ॥

ಮಳೆಯನು-ಬೆಳೆಯನು, । ಜಲವನು-ಫಲವನು, ।
ಬಲವನು-ಗೆಲವನು, । ಸಕಲವನು ॥
ಒಲಿದಿಳೆಗಿತ್ತು ನಿತ್ಯ । ಭಕ್ತವರದನಾಗಿ ।
ಬೆಳಗುವ ಪರಮಾತ್ಮ । ಲೋಕಾಭಿರಾಮ ॥

ಸಕಲ ಭುವನಪಾಲ! । ಪಾವನವನಮಾಲ! ।
ನಿಖಿಲ ದನುಜಕುಲ । ಕಾಲಬಲ! ॥
ಅಕುಟಿಲ! ಸದಮಲ । ಶೀಲ! ನೀರದನೀಲ! ।
ವಿಕಸಿತ ಲೀಲಾ । ಲೋಲ ವಿಶಾಲ ॥

ಶಂಖಚಕ್ರಕರ! । ಪದ್ಮಗದಾಧರ! ।
ಸಂಕಟಸಂಹರ! । ಅಭಯಕರ! ॥
ಕಿಂಕರಸುಖಕರ! । ವೈರಿಭಯಂಕರ ।
ಶಂಕರ ಪ್ರಿಯಕರ । ಸಕಲಾಧಾರ ॥

ವೇದವ ಸಲಹಿದ, । ಗಿರಿಯನುದ್ಧರಿಸಿದ, ।
ಮೇದಿನಿಗಭಯವ । ಪಾಲಿಸಿದ, ॥
ಸಾಧು ಬಾಲನ ಕಾಯ್ದು, । ಬಲಿಭಯ ಹರಿಸಿದ, ।
ಯೋಧಪಾರ್ಥಿವರಿಗೆ । ಮೋಕ್ಷವನಿತ್ತ ॥

ದಶಮುಖಮರ್ದನ, । ಕಂಸವಿದಾರಣ, ।
ವಿಷಮತ್ರಿಪುರಸಂ । ಹರಣ ಗುಣ, ॥
ಅಸಮನೀಚ ಮ್ಲೇಂ । ಛಾಂಕುರ ಭಂಜನ ।
ಅಸುರಾರೀ! ಭೋ! । ದಶಾವತಾರಿ ॥

ಅಳಿದೆಳೆದಿಳೆಯನು, । ಶರಣನ ಮೆಟ್ಟಿ, ಕಲ್ಲ ।
ಲಲನೆಯನ್ನಾಗಿ ಮಾಡಿ, । ವಿಷಧರನ ॥
ತುಳಿದ ವಿಷದ—ಗಂಗಾ । ವಿಷದ ಶೀತಲಪಾದ ॥
ಜಲರುಹಂಗಳ ನೆನೆ । ದರೆ ಭಯವುಂಟೆ? ॥

ದೇವನೆ ನಿನ್ನಯ । ನಾಮವ ನುತಿಸಿದ ।
ಶ್ರೀ ವಾಲ್ಮೀಕಿ, ಅ । ಜಾಮಿಳರು, ॥
ಕೋವಿದ ಕನಕ, ಕ । ಬೀರಾದಿಗಳೂ ।
ಪಾವನರಾದರು । ದೀನಾಧೀನ ॥

ಶರಣ ಪ್ರಹ್ಲಾದನಿಗೆ ಪ್ರಹ್ಲಾದಕರನಾದೆ, ।
ತರಳ ಧ್ರುವಗೆ—ಧ್ರುವ । ಪದವನಿತ್ತೆ, ॥
ಕರಿಯ ಕಾಯಲಿಕಾದೆ, । ಬಲಿಯ ಬಾಗಿಲಿಗಾದೆ, ।
ತರಳೆ ಪಾಂಚಾಲೆಗೆ । ಬೆಂಬಲನಾದೆ ॥

ದೀನರೊಡೆಯ ನೀನು । ದೀನರೊಡೆಯ ನಾನು ।
ದಾನಹಸ್ತನು ನೀನು—। ನನ್ನಂತೆಯೆ ॥
ಮಾನವಂತನು ನೀನು— । ಮಾನವಂತನು ನಾನು ।
ನೀನು ಲಕ್ಷ್ಮೀಶನಂತೆ । ಲಕ್ಷ್ಮೀಶ ನಾನು ॥

ನೀನು ನನ್ನವನೆಂದು । ಭಾವಿಪೆ ಪರಮಾತ್ಮ ।
ನಾನು ನಿನ್ನವನೆಂದು । ಭಾವಿಸಯ್ಯ ॥
ನೀನು—ನಾನೆಂಬಾ । ಭೇದವನೆಣಿಸದೆ ।
ದೀನದಾಸನ ಕಾಯೋ! ದೇವ! ಲಕ್ಷ್ಮೀಶ ॥

## ಕೆ. ವಿ. ಕೃಷ್ಣಭಟ್ಟ

### ೧ ದಶರಥನ ಚಿಂತಾಸಂತಾಪಂ

ರಾಮಂಗೆ ಲೋಕಾಭಿರಾಮಂಗೆ ದೊರೆತನದ
ರಾಮಣೀಯಕ ಭದ್ರಮಾಂಗಲ್ಯಮಂ ಸಾರ್ಚಿ
ಕೋಮಲಾನಂದಸಂದೋಹಾಂತರಂಗ ಸು
ಕ್ಷೇಮದಿಂ ನಿಶ್ಚಿಂತನಹೆನೆಂದು ಸಗ್ಗಕ್ಕೆ
ಬುತ್ತಿಯಂ ಕಟ್ಟಿದೆಂ! ಹಾ! ಎನ್ನ ವಿಧಿಯೆ! ಮು-
ಚ್ಚಿತ್ತಕ್ಕೆ ಮೋಣೀಕೆ ಕೈಕೆ ಕಯ್ದುಗ್ಗತ್ತಮಂ
ಪತ್ತಿಸಿದಳೇಕೊ? ಸುಖಜೀವನದ ನೆಲೆವನೆಗೆ
ಪೊತ್ತಿಸಿದಳುರಿಯನಿಂತಕಟ! ಎರ್ದೆ ಬೆಂದಪುದು!
ತಾರುಣ್ಯಭರದ ಕಾಮಿನಿಗೆ ಸುತಮೋಹದಿಂ
ಕಾರುಣ್ಯಮಿಲ್ಲದುದು ಚಿತ್ರಮಲ್ಲಂ; ಮುಪ್ಪು
ಮಿಾರಿರ್ದ ಮುದುಕನೀ ಕೋಮಲೆಯ ಕವಡಿಂಗೆ
ಸೂರೆವೋದುದು ಚಿತ್ರಮಿದೊ ರಾಮಚಂದ್ರಮಂ
ಮುದಿತನಕೆ ಮಮತೆಯಾ ಕಣ್ಣೆಂದು ನಚ್ಚಿರಲ್
ಮುದಲತೆಯು ಬೇರ್ಗೆ ಬೆನ್ನೀರನೆರೆದಳ್ ದುಷ್ಟೆ!
ಮೆದುನುಡಿಯ ಬಾಲೆಗಾಂ ವರವೆರಡನಿತ್ತುದುಂ
ಹೃದಯಮಂ ಕೊರೆಕೊರೆದು ಜೀವಮಂ ಹಿಂಡಿದಳ್!
ಭರತಂಗೆ ರಾಜ್ಯಮಂ ಕುಡಲೆನ್ನ ಚಿತ್ತಕ್ಕೆ
ಮರುಕಮಾಗದು; ರಾಮಚಂದ್ರಮಂ ಕಾಡಿಂಗೆ
ಪೊರಮಟ್ಟು ಪೋಪನೆನೆ ಮನ್ಮನಂ ಕರಗುಗುಂ!
ಪಿರಿದೆನಿಪಯೋಧ್ಯೆ ರಾಮನನುಳಿದು ಶೂನ್ಯಮಯ್!
ಸಂತತಿಗೆ ನಾಲ್ವರುಂ ಸಂತೋಷದಾಯಿಗಳೆ
ಸಂತತಂ ಚಿಂತಾಪನೋದಿಗಳೆ ಮೋಣವರೊ-
ಳೆಂತುಮೆನ್ನೀ ಮನೋಭವನಕ್ಕೆ ರಾಮನೇ

ಶಾಂತಾಭಿನವಮನೋಭವನಿಭಂ ಶುಭಕರಂ!
ರಾಜ್ಯಮುಂ ಭರತೆಂಗೆ ಕುಡುವೆನೀಕೆಯು ಮನೋ-
ರಾಜ್ಯಕ್ಕೆ ಸಂತುಷ್ಟಿಯಕ್ಕೆ! ಅಂತಾದೊಡಂ
ರಾಜ್ಯದಿಂ ರಾಮನಂ ಪೊರಮಡಿಪುದೇ? ಮನೋ-
ರಾಜ್ಯಮಿದು ಸಂತತಂ ವಿಾಸಲಿಹುದಾತಂಗೆ!
ರಾಮನಂ ಪ್ರೇಮಘನಜಲಸಿಕ್ತಚಿತ್ಸುಖಾ-
ರಾಮನಂ ಸುಗುಣಾಭಿರಾಮನಂ ಕಣ್ಬೆಲನ
ಸೀಮೆಯಿಂ ಪೊರಮಡಿಸಿ ಬರ್ದುಕುವೆನದೆಂತೊ? ಹಾ!
ಈ ಮನೋರಥಮಿರದೊಡೆಂತಪ್ಪ ದಶರಥನೊ?
ಸಂತಾನಮಿತ್ತು ಸೊಗಮುಣಗೊಡದ ದುರ್ವಿಧಿಗೆ
ಸಂತತಂ ಚಿಂತೆಯಾ ಸಂತಾನಮೋ ಸುಖಂ!

## ೨ ಆನಂದಗೀತೆ

ಅಂಬುಜದರೆಮುಗುಳ್ಗಂ ಬಿರಿಯಿಸುತಿನ-
ಬಿಂಬಂ ಮೂಡಲ್ ಮೂಡುತಿರೆ;
ಮುಂಬಗಲ ನಿರಭ್ರಾಂಬರದೆಡೆಯೊಳ್
ಹೊಂಬಿಸಿಲಿಗೆ ಕಳೆಗೂಡುತಿರೆ;
ಪಸರಿಸುತುಂ ದೆಸೆದೆಸೆಗಂ ಕಿರಣದ
ಪೊಸತೆರೆ ನರ್ತನವಾಡುತಿರೆ;
ಕುಸುಮದೆಸಳ್ಗಳ ಪೊಸಮೆಯ್ಸಿರಿ ಸಂ-
ತಸಮಂ ನೋಟಕೆ ಮಾಡುತಿರೆ;
ಮುಂದಿಹ ಪೂಗೊಳದೊಂದರವಿಂದಂ
ಮಂದಾನಿಲಕೊನೆದಾಡುತಿರೆ;
ಸುಂದರಕೋಮಲಕುಸುಮಸುಗಂಧಂ
ಮಂದಂ ಮಂದಂ ತೀಡುತಿರೆ;
ನಿಂದೆಡೆ ನಿಲ್ಲದೆ ಸುಮುಸುಮುಕೆರಗುತೆ
ಪೆಣ್ದುಂಬಿಗಳೋಡಾಡುತಿರೆ;
ಸೌಂದರ್ಯದ ಹೃನ್ಮಂದಿರದೊಳ್ ಮೃದು
ಬಂಧುರಭಾವಂ ಮೂಡುತಿರೆ;

ಕಂದದೆ ಕುಂದದವುಂದಾನಂದದೊ-
ಳಿಂದುವದನೆ ಕುಣಿದಾಡುತಿರೆ;
ಬಂಧನವಿರಹಿತ ಮನ್ಮನಮತುಲಾ-
ನಂದಾಬ್ಧಿಯೊಳೋಲಾಡುತಿರೆ;
ಸುಂದರನಾರೀಮಣಿ ಮದಿರೇಕ್ಷಣ-
ದಿಂದೆನ್ನಂ ನಡೆನೋಡುತಿರೆ;
ಮುಂದೆಸೆಯಬಲಾವೃಂದಂ ಬಿರಿವೂ-
ದಂದಲನಂದೆರಚಾಡುತಿರೆ;
ಅಂಗಜ ಜಯಗೀತಂಗಳನೊಲ್ದು ಲ-
ತಾಂಗಿಯರೆಲ್ಲರ್ ಪಾಡುತಿರೆ;
ಸಂಗೀತಾಬ್ಧಿಯ ಮಂಗಲನಾದತ-
ರಂಗಾವಳಿಯೆಡೆಯಾಡುತಿರೆ;
ಅವಿರಲ–ಮಂಜುಲ–ಕಲನಾದಂ ಕೋ-
ಕಿಲನಾದಕ್ಕೆಣೆಗೂಡುತಿರೆ;
ಸವಿಸವಿದಮೃತಾಸವದೊಂದನುಪಮ
ನವಚೇತನ ತಲೆಗೋಡುತಿರೆ;
ಬುವಿಯಲ್ಲಿಹೆನೆಂಬವಸರವರಿಯದೆ,
ಭವದಾಚೆಗೆ ಮನವೋಡುತಿರೆ;
ನವಸುಖಸಾಮ್ರಾಜ್ಯವದಿನ್ನೊಂದೇ
ದಿವಸಕೆ ಕಯ್ವಸಗೂಡುತಿರೆ;
ಕುಣಿಕುಣಿಯುತೆ ಪೆಣ್ಮಣಿಯೊರ್ವಳ್ ನಸು
ಮಣಿದೆನ್ನಂ ಮುದ್ದಾಡುತಿರೆ;
ದಣಿಯದೆ ವಿಶ್ವಾಂಗಣನರ್ತನದೊಂ-
ದೆಣಿಕೆಗೆ ಹುರುಪೊಡಗೂಡುತಿರೆ;
ಅಡಿಗಡಿಗಮೃತದ 'ಗಡಿಗೆ'ಯ ಪಾನವ
ಕುಡಿಯುತೆ ಕುಣಿಕುಣಿದಾಡುವೆನು.
ಬಿಡಿಬಿಡಿನುಡಿಯಿಂ ತಡೆತಡೆಯದೆ ನಾಂ
ಬೆಡಗಿನ ಕವಿತೆಯ ಪಾಡುವೆನು.

## ೩ ಧೀರ! ನೀನೇಳು! ಜಾಗೃತನಾಗು!

ಧೀರ, ನೀನೇಳು, ಜಾಗೃತನಾಗು, ಸದ್ಧರ್ಮ
ಸಾರಮಂ ಬೋಧಿಪಾ ಸೂರಿಗಳ ಪಾದಪಂ-
ಕೇರುಹಮನಾಶ್ರಯಿಸಿ, ಸತ್ಯಧರ್ಮಜ್ಞಾನ ಬೋಧೆಗಳ ಸಾಧನೆಯೊಳು
ದಾರಿತಪ್ಪದೆ ನಡೆದು ಪಡೆದಾತ್ಮಸಿದ್ಧಿಯು ವಿ-
ಚಾರದುತ್ಪಥದೊಳಡಿಯೂರಿ, ನಿಶ್ಚಲ ಸತ್ತ್ವ-
ಸಾರದಧಿಕಾರಮಂ ತೋರಿಸಾ ಶೂರನ ಗಭೀರ ನಿರ್ಧಾರದಂತೆ.

ದೂರದೊಳೆ ಕೇಳಿಸುತ್ತಿದೆ ತೂರ್ಯರವಮೊಂದು;
ತೋರುತಿದೆ ಮುಂಬೆಳಗು ಮೂಡಣದ್ರಿಯು ಮೇಲೆ;
ಜಾರುತಿದೆ ಕತ್ತಲೆಯು ಮೊತ್ತಮೆತ್ತೆತ್ತಲೋ ಕಂಗೆಟ್ಟು ಭಂಗಬಟ್ಟು;
ಧಾರಿಣಿಯೊಳಿಂದು ನವಚೈತನ್ಯಮೊಂದು ತಲೆ-
ದೋರುತಿದೆ; ಭಾರತದ ಭಾಗ್ಯಾರುಣೋದಯಂ
ಸಾರುತಿದೆ ಸನಿಯಕ್ಕೆ ಕರ್ಮರಂಗಕ್ಕಿಳಿವ ಸತ್ಕರ್ಮಸಂಗಿಯಂತೆ.

ಎದ್ದೇಳು, ಭರತಸುತ! ನಿದ್ದೆಯಂ ತೊರೆದು, ಪ್ರ-
ಬುದ್ಧನಾಗೆಲೆ ವೀರ! ಬಿದ್ದ ಮೆಲ್ವಾಸಿನೊಳೆ
ಬಿದ್ದಿರ್ಪ ಜಾಡ್ಯದಾ ಮುದ್ದೆಯೆನೆ! ನಿನ್ನಪ್ರಬುದ್ಧತೆಗದೇನೆಂಬೆನೋ?
ಬುದ್ಧಿಹೀನತೆಯನುಳಿದಾರ್ಯಕುಲಕೊಪ್ಪುವಭಿ-
ವೃದ್ಧಿಯೆಸಕಕ್ಕೆ ಕಯ್ಯಿಕ್ಕು ತಕ್ಕಂದದೆ ವಿ-
ಶುದ್ಧಚಾರಿತ್ರದಿಂ ಸದ್ಧರ್ಮಸೂತ್ರದನುವರ್ತನಕೆ ಪಾತ್ರನಾಗಿ.

ಭಯಮೇಕೆ? ಭರತಕುಲತಿಲಕ! ಸತ್ಪುರುಷರಾ-
ಶ್ರಯದೊಳುಂಟಾತ್ಮಬಲಮುಳ್ಳ ಧೀರಂಗೆ ನಿ-
ಶ್ಚಯದ ಜಯಮೆಂದು, 'ಬಲಹೀನೇನ ನಾಯಮಾತ್ಮಾ ಲಭ್ಯ'
ಎಂದುದಾಗಿ,
ನಯದೊಳುಪದೇಶಮಂ ಪಡೆದ ಕಾರಣದಿಂದೆ,
ಭಯಮೆಂಬುದದು ಮೃತ್ಯು, ನೋಡೆ, ನಿರ್ಭೀತಿಯ-
ಕ್ಷಯಸುಖದ ಜೀವನಾಧಾರಮೆಂಬುದನರಿತು, ನಡೆ ಮುಂದೆ
ಭಯಮಿಲ್ಲದೆ.

ಗತನ್ಮೈಭವಂಗಳಂ ನೆನೆನೆನೆದು ಪೂರ್ವಪ-
ದ್ಧತಿಗಳಂ ಕೊಂಡಾಡಿ ಪಾಡಿ ನಲಿದಾಡೆಯುಂ-
ನ್ನತಿಯು ಗತಿ ಕಯ್ಗೂಡದೆಂಬ ಮೂಢರ ಮಾತಿಗೆಡೆಮಾಡಲೇಕೆ ಬರಿದೆ?
ಗತಸುಕೃತಬೀಜಮೇ ಮುಂದೆ ಮೊಳೆದೋರ್ಪ ಸ-
ದ್ಗತಿಗೆ ಕಾರಣಮೆಂಬ ನೆಲೆಯರಿತು ಪೂರ್ವಸಂ-
ಸ್ಕೃತಿಯು ಸುಸ್ಥಿತಿಯು ಪದ್ಧತಿಯುನನುಕರಿಸಿ ಗುಣವಂತಧೀಮಂತನೆನಿಸು.

ಇಳೆಯೊಳಾರಾದೊಡಂ ನಿನ್ನ ಸದ್ವರ್ತನಕೆ
ಪಳಿಪೊರ್ದುವಂತೆ ಕೇಡೆಣಿಸಿದೊಡಮದಕೆ ನೀಂ
ಮುಳಿದೆಸಗದಿರ್ ಪ್ರತೀಕಾರಮಂ, ಮೌನಿಯಾಸೀನನಾಗಿರ್ದು ಬಳಿಕ;
ಕಳೆವೆತ್ತ ನಿರ್ಮಲಚರಿತ್ರಮಿರ್ಪೊಡಮಲ್ಲಿ
ಕಳೆಗೆಟ್ಟ ಛಿದ್ರಮಂ ಬೆರಲೆತ್ತಿ ತೋರ್ಪ ಕಿರು-
ಕುಳದ ದುರ್ಜನನಿಂದೆ ತಪ್ಪದದರಿಂದಮೆದೆಗುಂದದಿರ್ ನೀನೆಂದಿಗೂ.

ಪರರ ನಡೆನುಡಿಯುನನುಕರಿಪಲ್ಲಿ ತನ್ನ ಸ-
ಚ್ಚರಿತಕ್ಕೆ ಭಂಗಮಂ ತಾರದೆ ವಿಚಾರ ತ-
ತ್ಪರನಾಗಿ ಗುಣವನಂಗೀಕರಿಸಿ ಬಾಳ್ವುದೇ ಲೇಸದಕೆ ದೋಸಮಿಲ್ಲ
ಧರೆಯೊಳ್ ಸ್ವಧರ್ಮದಿಂ ಬಾಳ್ವಪೆಂ, ಪರರುಮಾ-
ಪರಿಯೊಳೆಂದುಂ ಬಾಳ್ಗೆ ತಡೆಯೇತಕೆಂಬ ನಯು-
ದೆರಕಮನ್ಯೋನ್ಯಮುಂಟಾದೊಡಿನ್ನಾ ಬಾಳ್ವೆಯಮೃತಮಯ-
ಮಾಗದಿಹುದೇ.

ಬದ್ಧನಾಗಿರ್ದುಂ ಸ್ವಸಿದ್ಧ ಸ್ವತಂತ್ರತೆಗೆ
ಬದ್ಧಾದರಂದೋರದಿರ್ದು, ಕೂಪದೊಳಿರ್ದ
ದರ್ದುರಂ ಕರ್ದಮದ ಪೊರ್ದುಗೆಯೆ ಬರ್ದೆಂದು ಭಾವಿಸುವ
ತೆರದೊಳೀಗ
ಬಿದ್ದು ನಡೆಗೆಡೆವಲ್ಪಬುದ್ಧಿಯೇತಕೆ? ನಿನ್ನ
ಶುದ್ಧಸತ್ತ್ವದಸಾರಸಿದ್ಧಿಯುಂ ಜಗಕೆ ತೋ-
'ರುದ್ಧರೇದಾತ್ಮನಾತ್ಮಾನಮೆ'ಂಬಾ ಸೂಕ್ತಿ ಶಕ್ತಿಯುಂ ನಿನಗೀಯದೇ?

## ಎಸ್. ಪಿ. ಭಟ್ಟ

### ೧ ಸಫಲ

(ಹೂವಿನ ಹಾರೈಕೆ)

ಬಾರೆನ್ನರಸ!
ಆಡೈ ಸರಸ!
ಈ ಪ್ರೇಮರಸ,
ಈ ರಾಗರಸ—
ನಿನಗೆಂದೇ ನಾನಾಂತಿಹೆನಲ್ಲ!—
ನಿನಗೀಯದೆ ನಾನೆಂತಿಹೆ, ನಲ್ಲ?

ಎನಿತು ವಿಲಂಬನ!
ಒಂದೇ ಚುಂಬನ
ನಿನ್ನಿಂ ಕೊಂಬನ-
ಕೆನ್ನವಲಂಬನ
ಎದೆ ಕೊರೆಕೊರೆವೀ ಗುರುತರ ಚಿಂತೆ!—
ಇದನುಳಿದೊಂದಿರದೆನಗಿದರಂತೆ.

ಗಲ್ಲಕೆ ಗಲ್ಲ-
ವಾನಿಸಿ ಮೆಲ್ಲ,
ಇನಿಸಿನಿಸೊಲ್ಲ-
ನುಲಿಯೆಯ, ನಲ್ಲ?
ತಲ್ಲಣಿಸುತಲಿದೆ ಮನವೆನಿತೊಂದು!—
ಸಲ್ಲಿಸೆಯಾ ವರವನ್ನಿನಿತೊಂದು?

ಮುಗುಳುನಗುತ್ತ,
ಬಿಗಿಯುತ ಕತ್ತ,
ಕುಟಿಯುದುಮುತ್ತ

ನೀಡಲು ಮುತ್ತ,
ಇದೊ, ನನಗಾಗಲೆ ಬ್ರಹ್ಮಾನಂದ!—
ಇದೆಯೇ ಸೊಗವೆನಗಿನ್ನಿದರಂದ?

ಕುರುಳನು ತೀಡುತ
ಮೆಲ್ಮಾತಾಡುತ,
ನಾಲಿಗೆ ನೀಡುತ
ಮಧುವನ್ನೂಡುತ,
ಮರುಚಣವೇ ನೀಂ ತೊರೆದರು ತಾಳ್ವೆ:
ಇರದೆ ಸಫಲವನಿತರೊಳೀ ಬಾಳ್ವೆ?

## ೭ ಏನಾಶೆಯುಂಟೆ?

ನಾನೆ ಕಣ್ಣ ತೆರೆಯುತಿರಲು ಜ್ಯೋತಿ ಕಂದಿ ನಂದಬೇಕೆ?
ನಾನೆ ಕಿವಿಯ ನೀಡುತಿರಲು ವಾಣಿ ಮೌನಹೊಂದಲೇಕೆ?
ನಾನೆ ಕೈಯ ಚಾಚುತಿರಲು ವರವು ಮುಗಿದು ಮಾರಬೇಕೆ?
ನಾನೆ ಮೊರೆಯನಿಡುತಲಿರಲು ಕರುಣೆಯೊರತೆಯಾರಲೇಕೆ?

ನಾನೆ ನೀರಡಿಕೆಯ ತಣಿಸೆ ನೀರ ಸಾರಲೋಡುತಿರಲು
ನಲಿದು ಚಿಮ್ಮಿ ಹಾರುತಿರುವ ಝರಿಯು ಭರದೊಳಿಂಗಬೇಕೆ?
ನಾನೆ ಹಸಿವ ನೀಗುವಾಸೆಯಿಂದ ಕೈಯ ನೀಡುತಿರಲು
ಬಲಿತು ರಸವ ಜಿನುಗುತಿರುವ ಹಣ್ಣ ಮಣ್ಣ ನುಂಗಲೇಕೆ?

ಮನವ ಸೆಳೆವ ಸೊಂಪಿನಿಂದಲೆಣೆಯದಿರದ ಕಂಪಿನಿಂದ
ಭುವನವನ್ನೆ ಮರುಳುಗೊಳಿಸಿ ಮೆರೆಯುತಿರಲು ಕುಸುಮವೃಂದ,
ಮನದೆ ಸೋತು ಮುಡಿಯಲೆಂದು ನಾನೆ ಸಾರುತಿರಲದೊಂದ,
ತವಕದಿಂದಲೆಲ್ಲ ಮಾಯವಾಗಬೇಕೆ, ಕನಸಿನಂದ?

ಆರು ಪಡೆಯದನಿತು ಭಾಗ್ಯವಿಂತು ನನ್ನದಾಯಿತಲ್ಲ!
ಭೂರಿ ಮುದದಿ ನಲಿಯುತಿರುವೆನೆನ್ನ ಪುಣ್ಯಕೆಣೆಯದಿಲ್ಲ!!

## ೩ ತುಂಬಿಯ ವಿಲಾಪ

ಕಮಲಿನಿಯೆ! ನೀ ನಿನ್ನ
ರಮಣನನ್ನಗಲುತಿರೆ,
ಕಮನಹತಿಗೀಡಾಗಿ, ಸಂಭ್ರಮದಲಿ,
ರಮಣೀಯ ನೋಟದಿಂ,
ಕಮನೀಯ ಗಂಧದಿಂ,
ಭ್ರಮೆಗೊಳಿಪ ಮೋಹಜಾಲವ ಹರಡಿದೆ!

ಚೆನ್ನೆ! ಚಂಚಲನಾಗಿ,
ನಿನ್ನಧರಮಧುವ ನಾ-
ನುಣ್ಣುವಭಿಲಾಷೆಯಿಂದಿಲ್ಲಿ ಬಂದು,
ನಿನ್ನಯಾಲಿಂಗನದಿ-
ನೆನ್ನ ಜೀವನವಿಂದು
ಧನ್ಯವಾಯ್ತೆಂದು ಮೈಮರೆತೆ, ವಿನುತೆ!

ಉಕ್ಕುವಾನಂದದಲಿ—
ಲೆಕ್ಕಿಸದೆ ಬರಲಿರುವ
ಮಿಕ್ಕ ಸಂಕಟಪರಂಪರೆಗಳನ್ನು—
ಸಿಕ್ಕ ಮಕರಂದವನು
ಸೊಕ್ಕಿ ಹೀರುತಲೀಗ
ಸಿಕ್ಕಿರುವೆನೇಳಲರಿಯದೆ ನಿನ್ನಲಿ!

ಅಂಟಿಕೊಂಡಿದೆ ಕಾಲು,
ಗಂಟುಕಟ್ಟಿದೆ ರೆಕ್ಕೆ,
ಗಂಟಲಿನವರೆಗುದರ ತುಂಬಿರುವುದು;
ಕಂಟಕವ ನಾನೆ ನನ-
ಗುಂಟುಮಾಡಿದೆನಯ್ಯೊ!—
ಶುಂಠತನಗೈದುಣುವೆ ಕರ್ಮಫಲವ!

ಎಸೆವ ಗುಂಪನು ಸೇರಿ,
ಕುಸುಮಕುಸುಮಕೆ ಹಾರಿ,
ಬಸವಳಿದು ಜೇನ ಝೇಂಕರಿಸಿ ಹೀರಿ,
ಹಸಿವ ನೀಗುತಲುಳಿವ
ಹಸಿಯ ಮಕರಂದವನು
ಹಸನು ಗೂಡಲಿ ತಂದು ಸುರಿಯಲೆಂದು?

ಮುಂದಾರೆಯೊಂದಿಗಾ-
ನಂದದಲಿ ಪ್ರಣಯವ-
ನ್ನೆಂದೆಸಗಲಿನ್ನುಮುಂದಕಟ! ನಾನು?
ಎಂದು ನಾನೇಕಾಂತ-
ದಿಂದ ಮೆಲ್ಮಾತುಗಳ-
ನಂದದುಲಿಯಲಿ ಪಾರಿಜಾತೆಯೊಡನೆ?

ಸಂಪನ್ನೆ ಮಾಲತಿಯ
ಸಂಫುಲ್ಲವದನವನು
ಸಂಪ್ರೀತಿಯಿಂದ ಚುಂಬಿಸಲದೆಂದು?
ಸಂಪನ್ಮಣಿಯೆ! ರಮೆಯ
ಸಂಪರ್ಕ ಸುಖವನ್ನು
ಸಂಪ್ರಮೋದದಲಿನ್ನು ಹೊಂದಲೆಂದು?

ಕರ್ತವ್ಯವನು ಮರೆತು
ವರ್ತಿಸುವ ಮಾನವರ
ಮೃತ್ಯುದೇವತೆ ತಬ್ಬಿಕೊಳುವಂದದಿ —
ನರ್ತಿಸುತ ಮಧುವ ನಾ-
ನರ್ತಿಯಲಿ ಸವಿಯುತಿರೆ,
ಕೀರ್ತಿಯುತೆ! ನೀನೆನ್ನನಪ್ಪಿದೆಯಲಾ!

ಮನುಜರಾ ಷಡ್ವೈರಿ-
ಗಣಮಧ್ಯದಲಿ ನಲಿದು
ತನುಮನಧನಂಗಳನು ಸವೆವಂದದಿ—
ವನಜಮುಣಿ! ನಾ ನಿನ್ನ
ನನೆಯೆಸಳ್ಗಳ ನಡುವೆ
ಕುಣಿದು ಸವೆಸುವೆನೆನ್ನ ಜೀವನವನು!

ನೀರಜೆಯೆ! ನಿನ್ನೊಲವಿ-
ನೋರೆ ನೋಟವಿದೆನಗೆ
ಕೂರಲಗು ತಾನಾಗಿ ಪರಿಣಮಿಸಿತೇ!
ಭೂರಿ ಸಂತೋಷಕರ
ಸೌರಭವು ತಾ ಪ್ರಾಣ-
ಹಾರಕವದಾಗಿ ಮಾರ್ಪಟ್ಟಿತೇ! ಹಾ!!

ಗುಂಜಾರವಂ ಗೈದು
ಮಂಜುಳ ಸುಮಂಗಳಿಂ
ಭುಂಜಿಸುತ ಹರುಷದಲಿ ನಾಂ ಜೇನನು—
ಪಂಜರದಿ ಸಿಲುಕಿರುವ
ಕುಂಜರಾರಾತಿಯೊಲು—
ಕಂಜಮಣಿ! ನಿನ್ನಲ್ಲಿ ಸಿಲುಕಿದೆನೆ! ಹಾ!!

ಆಪ್ತೇಷ್ಟರೆಲ್ಲರುಂ
ಸಪ್ತಸಾಗರದತ್ತ;
ಗುಪ್ತದಲಿ ನಾನಿಲ್ಲಿ ಬಂಧನದಲಿ,
ಪ್ರಾಪ್ತ ಸಂಕಟದಿ ಸಂ-
ತಪ್ತ ಹೃದಯದಲಿ ನಿ-
ರ್ಲಿಪ್ತನನು ಧ್ಯಾನಿಸುತ, ತೊರೆವೆನಸುವ!

## ೪ ನವಯುಗವೋ, ಇದು ಕಲಿಯುಗವೋ?

ನವಯುಗವೋ,
ಇದು—
ಕಲಿಯುಗವೋ?

ಸತ್ಯವ ಮುಸುಕಿದೆ
ಕತ್ತಲೆಯ್ಕೆ!
ಮಿಥ್ಯವು ನಲಿವುದು
ಬತ್ತಲೆಯ್ಕೆ!

ನೀತಿಯು ಎಲ್ಲಿದೆ?—
ಮೋಣ್ ನ್ಯಾಯ?
ಅನೀತಿಯೆಲ್ಲೆಡೆ,
ಅನ್ಯಾಯ!

ಜ್ಞಾನಕಧೋಗತಿ
ಸಂದಿಹುದು!
ಮೌಢ್ಯಕ್ಕುನ್ನತಿ
ಬಂದಿಹುದು!

ಘನತೆಯ ಯೋಗ್ಯನು
ಕಳೆದಿಹನು!
ಪದವನಯೋಗ್ಯನು
ತಳೆದಿಹನು!

ವಸ್ತುವನಿದೊ ಕೈ-
ಬಿಟ್ಟಿಹರು!
ಛಾಯೆಗಿದೋ ಕೈ-
ಕೊಟ್ಟಿಹರು!

ಆರೋಗ್ಯವು ಮರೆ-
ಯಾಗಿಹುದು!
ರೋಗರುಜೆಯೆ ಧರೆ-
ಗಾಗಿಹುದು!

ಸ್ವಾತಂತ್ರ್ಯವು ಕಹಿ-
ಯಾಗಿಹುದು!
ಪಾರತಂತ್ರ್ಯ ಸಿಹಿ
ತಾಗಿಹುದು!

ಶಾಂತಿಗೆ ಸಂದಿದೆ
ವಿಶ್ರಾಂತಿ!
ಕ್ರಾಂತಿಯು ಹೊಂದಿದೆ
ವಿಭ್ರಾಂತಿ!

ಮರೆತಿಹರೆಲ್ಲರು
ದೇವನನು!
ಸ್ತುತಿಸುವರೆಲ್ಲರು
ಹೇವವನು!

ನವಯುಗವೋ,
ಇದು—
ಕಲಿಯುಗವೋ?

---

## ಪುಂ. ಅನಂತರಾವ್

### ೧ ನಗುಮೊಗವ ತಳೆದಿರಲು

"ದುಃಖಾದುದ್ವಿಜತೇ ಸರ್ವಃ ಸರ್ವಸ್ಯ ಸುಖಮೀಪ್ಸಿತಮ್"—
ಮಹಾಭಾರತ, ಶಾಂತಿಪರ್ವ.

ನಗುಮೊಗವ ತಳೆದಿರಲು ನಗುತ ಬಳಿಗೈದುವರು
ದುಗುಡದಿಂದಳುತಿರಲು ಗಮನಿಸುವರಿಲ್ಲ
ಸೊಗವ ಹೆರವರ ಬೇಡಿ ತೆಗೆದುಕೊಂಡುಣಬೇಕು
ಜಗದಿ ಬೇಡದೆ ದೊರೆವ ದುಃಖಮದು ಸಲ್ಲ

ಹಾಡಿದೊಡೆ ಪಡಿನುಡಿಯು ಕಾಡುಗುಡ್ಡಗಳೆಲ್ಲ
ತೀಡಿ ಸಂತಸದಿ ಬೀರ್ವುವು ಬೀಗಿ ಕೂಗಿ
ಕಾಡುತಿಹ ಮನದಳಲ ಪೀಡೆಯಾ ನಿಟ್ಟುಸಿರ
ಪಾಡು ಪೋದಪುದಡಗಿ ಗಾಳಿಪಾಲಾಗಿ

ಸಂತಸಂಬಡೆ ನಿನ್ನನಂತೆ ಆಶ್ರಯಿಸುವರು
ಚಿಂತಿಸಲು ನಿನ್ನ ತೊರೆದತ್ತ ಸಾರುವರ್ಕೈ
ಸಂತಸದ ಪಾಲು ಬೇಕಂತೆ; ಸಾಲದು. ಚಿಂತೆ
ಯಾಂತು ಬದುಕುವುದೆಂತು? ಬೇಡವೆನ್ನುವರ್ಕೈ

ಸ್ವೀಕರಿಸೆ ಮೋದದೊಳನೇಕ ಗೆಳೆಯರು ಬಹರು
ಶೋಕದೊಳ್ಗೆಳೆಯರುಂ ವಿಮುಖರ್ಕೈ ಮಹಿಯೊಳ್
ನೀಂ ಕೊಟ್ಟ ಸಿಹಿ ಸೊಗವ ಬೇಕು ಬೇಕೆಂದುಣುವ
ರೇಕಾಂತಮುಣಬೇಕು ವ್ಯಾಕುಲದ ಕಹಿಯೊಳ್

ಪಡೆದ ಸುಗ್ಗಿಯ ದಿನದಿ ಕೊಡಲೌತಣವ, ನೆರೆದು
ಸಡಗರದೆ ಬಂದು ಸೇರುವರು ಜನರೆಲ್ಲ,
ಮುಡಿಯಲಾರದೆ ಬಳಲುತೊಡಲಿನುಪವಾಸದಿಂ
ಮಡಿವಂದು ಕಣ್ಬಿಟ್ಟು ನೋಳ್ಪರಾರಿಲ್ಲ

ಎಂದು ಸಿರಿ ಮೆರೆದಿಹುದೊ ಅಂದೆ ನೆಂಟರುಮಿಷ್ಟ
ರೆಂದು ಸಂದಣಿಸಿ ಸುಖಿಸುವರು. ಹೆಚ್ಚೇಕೈ?
ಬಂದ ಸಂಪದವಾರೆ, ದಂದುಗಂ ಮಿಾರೆ, ನೀ
ಸಂದುಗೊಂದಿನೊಳೊರ್ವನೇ ನರಳಬೇಕೈ.

## ೨ ಕಳೆದು ಹೋದ ದಿನಗಳು

(ಟೆನಿಸನ್ ಕವಿಯ ಒಂದು ಹಾಡಿನ ಆಧಾರದಿಂದ)

ಕರುಳು ಕರಗಿ, ಬಿರಿದು ಎದೆಯು, ಕಣ್ಣನೀರಿ ಕೂಡುತ,
ನೆರೆ ನಿರಾಸೆಗಡಲಿನಾಳದಿಂದ ಕುದಿದು ಬರುವುದು:
ಅರಿಯೆನಿದರ ಅರ್ಥವನ್ನು—ಬರಿದೆ ಹರಿಯುತಿರುವುದು,
ಶರದಕಾಲದಲ್ಲಿ ಬೆಳೆಯ ಸಿರಿಯ ಹೊಲದಿ ನೋಡುತ,
ಸುಳಿಯೆ ನೆನಹು ಮನದೊಳಾ
ಕಳೆದು ಹೋದ ದಿನಗಳಾ.

ಬಂದು ನಿಂದು ಬಂಧುಬಾಂಧವರುಗಳೆಲ್ಲ ದೂರದೆ,
ತಿಂದು ತೇಗಿ, ನಲಿದು ಬೀಗಿ, ಹಬ್ಬ ಮಾಡಿ ಮನೆಯಲಿ,
ಹಿಂದೆ ಹೋಗುವಾಗ ಮೊಗವು ಕುಂದಿಯೆಲ್ಲ ಕೊನೆಯಲಿ
ಚಂದದಿಂದ ನೆಲಸಿ ಚಿತ್ತಭಿತ್ತಿಯಲಿ ವಿಚಾರದಿ
ಹೊಳೆವುವೆಂತು ಪಟಗಳಾ
ಕಳೆದು ಹೋದ ದಿನಗಳಾ!

ಹೋದ ಬಳಿಕ ಮನದೊಳೇಳ್ವ ಪ್ರಿಯೆಯ ಪ್ರಣಯಗೋಷ್ಠಿಯು—
ಖೇದದಿಂದ ಮಡಿದ ಮೇಲೆ ಸ್ಮರಿಪ ತಾಯ ನಲ್ಮೊಗಂ—
ಭೇದ ಬಂದ ಬಳಿಕ ನೆನೆವ ಗೆಳೆಯರಿತ್ತ ಸವಿಸೊಗಂ—
ಮೋದದಲಿ ವಿಷಾದ ಬೆರೆವ ವಿಧಿವಿಲಾಸಚೇಷ್ಟೆಯು!
ಅಳಿವೆ ಅಯ್ಯೊ ಬಾಳೊಳು
ಕಳೆದು ಹೋದ ದಿನಗಳು!

ಸಮಯ ತೀರಿ ಬತ್ತಿಯಾರಿ ನಂದುತಿರಲು ದೀವಿಗೆ,
ಸವೆದ ದೇಹದಲ್ಲಿ ಕಿವುಡು ಕಿವಿಗೆ, ಮಬ್ಬು ಕಣ್ಣಿಗೆ
ಅಮರಿ, ಕರೆಯುವಾಗ ಕೂಡಲೆಂದು ಮಣ್ಣು ಮಣ್ಣಿಗೆ,
ತನುದೊಳಿಹದ ಭ್ರಮೆಗಳಂತೆ ದಾರಿಗೆಟ್ಟ ಜೀವಿಗೆ—
ಅಳಲಗಡಲ ತೆರೆಗಳು
ಕಳೆದು ಹೋದ ದಿನಗಳು.

## ೩ ಧರ್ಮಕಾಗಿ

"ಧರ್ಮಕಾಗಿ ಜೀವವನ್ನು ತೆತ್ತನಯ್ಯ, ಭಾಪುರೇ!
ಕರ್ಮಬದ್ಧರಾರು ಮಾಳ್ಪರನಿತು?—" ತಾಳೆಲೈ:
ಮರ್ಮವೇನು ಜೀವನದೊಳಗೆಂದು ನಿರ್ಧರಿಸಿದೆಯಾ?
ಧರ್ಮಕಾಗಿ ಬದುಕಿ ಬಾಳ್ವನೇನು ಪೇಳೆಲೈ.

ಸಾವು ಸುಲಭ. ಲೋಭ ಮೋಹ ಜಂಭ ದಂಭ ದರ್ಪಕೆ
ಜೀವರೆನಿತು ಕಾಲ ಬಲಿಗಳಾಗಿ ಜವನಿಗೆ
ಸಾವರಲ್ಲ! ಅದರೊಳೆಲ್ಲ ಗರಿಮೆ ಹಿರಿಮೆ ಕೀರ್ತಿಯೇಂ?
ಯಾವ ಕಷ್ಟವೆನಿತು ಕಠಿನವಾದುದಿವನಿಗೆ?

ಹಿಡಿದ ಧರ್ಮದೀಕ್ಷೆಯನ್ನು ನೆನಸುಕನಸೊಳಾವಗಂ
ಬಿಡದೆ, ಬದುಕಿ ಬಾಳಲೆಳಸಿ ಮುಂದರಿಸಿದನೇ?
ಪೊಡವಿ ತೆಗಳಿ ಸಂಗಡಿಗರು ಹಿಂಜರಿದೊಡನುಂಜದೆ
ಎಡರು ತೊಡರುಗಳನು ಜಯಿಸಲುಜ್ಜುಗಿಸಿದನೇ?

ಅಂತೆ ಕಾದಿ ಹೋರಿ, ಹಾದಿ ತೋರಿ ಪಿಂತೆ ಬಹರಿಗೆ,
ಪಂತ ಮೆರೆದು ಶಾಂತಿವೆತ್ತ ಕತೆಯೆ ಬೇಕೆಲೈ!
ನಿಂತು ಧರ್ಮಕಾಗಿ ಬಾಳ್ದ ಹದನ ಬಿತ್ತರಿಪುದೆಲೈ!
ಎಂತು ಸತ್ತನೆಂಬ ವಾರ್ತೆ ಯಾರಿಗೇಕೆಲೈ?

## ೪ ಮಾಡಿದವನಿಗೆ ನೋಡಿದವನ ಕಾಣಿಕೆ

ಅವಲಕ್ಷಣವು ಚಿತ್ರವೇನಿದೆಂದೊದರಿದವ
ನವಸರದಿ ನುಸುಳಿದನು ಜವನವನ ಕರಿಸೆ
ಅವನಿಯೊಳಗಲರಿನಲಿ ಪರಿಮಳದ ತೆರದೊಳದು
ಹವಣು ಮಾಡಿತು ಜನರ ಬಾಳ್ತೆಯನು ಸತತಂ

ಗಾನವೇ? ಮುದಿಗೂಬೆ ಕೂಗಿದೆಂದಾ ಪಟುವು
ಊನವನೆ ಸಾರಿ ತೆರಳಿದನವಧಿ ಮುಗಿದು
ಜೇನಿನಲಿ ಸಿಹಿಯಂತೆ ಮಾನವರ ಜೀವನದಿ
ತಾನವದು ಕಲೆಕಲೆತು ಕೇಳಿಸುವುದನಿಶಂ

ಪೋಲು ನುಡಿಯಿದು ಕಾವ್ಯವೆಂತೆಂದವನ ಮಾತು
ತೇಲಿ ಹೋಯಿತನಂತ ನಾದಬ್ರಹ್ಮದಲಿ
ಹಾಲಿನಲಿ ಸವಿಯಂತೆ ಜನತೆಯೊಳಗದು ಸೇರಿ
ಕಾಲನನು ತುಳಿದು ನಿಂದಿಹುದಮರವಾಗಿ

ಮಂದಿರವ ನೋಡಿ ಮೊಗ ತಿರುಗಿಸಿದ ಪಂಡಿತನು
ಸಂದು ಹೋದನು ಕಾಲಲೀಲಾನಿಯಮದೆ
ಚಂದ ಮೈಯೊಳಗುಸಿರ ಬೆಡಗಿನಂತದು ನಿರುತ
ಮಂದಿ ಬದುಕಿನ ಸಂಸ್ಕೃತಿಯ ಬೆಳಗುತಿಹುದು

ನೋಡುವನು ಮನುಜಮಾತ್ರನು; ಕುಂದುಕುಂದುಗಳ
ನಾಡಿ ತೋರಿಸಿ ಮತ್ತೆ ಸಾರುವನು ಲಯಕೆ
ಮಾಡಿದವನಳಿದೊಡಂ ನೆನಹಿನಲಿ ನೆಲೆನೆಲಸಿ
ನಾಡಿನೊಳಗುಳಿಯುವನು ತನ್ನ ಕೃತಿಗಳಲಿ

## ೫ ಜಗದ ಸೋಂಕು

(ವರ್ಡ್ಸ್‌ವರ್ತ್ ಕವಿಯ ಕವಿತೆಯ ಆಧಾರದಿಂದ)

ಜಗದ ಸೋಂಕೆಮ್ಮನತಿ ಹಿಡಿದೆಳೆದು ಸೆಳೆದು
ಬಿಗಿದು, ಮಾಡಿತು ಸಪ್ಪೆ ನಮ್ಮ ಬಾಳ್ತೆಗಳ:
ಭಗವಂತನೆಮಗಿತ್ತ ಬುದ್ಧಿ ಶಕ್ತಿಗಳ
ಹಗಲಿರುಳು ದುಂದುಮಾಳ್ಪೆವು ದುಡಿದು ಕಳೆದು.

ಧವಳಾಂಶು ಬೆಳಬೆಳಗಿ ತಿಳಿಸೊದೆಯು ಸುರಿಯೆ,
ಲವಣಾಂಬುಧಿಯು ಪಾಲ ಕಡಲಾದ ಪರಿಯೆ!
ಪವನರಾಜನು ತನ್ನ ಲೀಲೆಗಳ ಮುಗಿಸೆ,
ಪವಡಿಸಿದ ಮಗುವಿನೋಲ್ ವಿರಮಿಸಿದ ಸೊಗಸೆ!

ಮುಗಳು ಹೂಗಳ ವರ್ಣಗಂಧಾತಿಶಯವೇ!
ಖಗಮೃಗನಿನಾದ ಸಂಗೀತಸಂಚಯವೇ!
ಬಗೆಗೆ ನಾಟದು. ಅಂದ ಚಂದ ಸವಿಯೊಂದೂ
ಸೊಗಯಿಸದು. ಕದಲದೀ ಗೊಡ್ಡು ಮನವೊಂದೂ!

ಕೋಮಲತೆ ಶಾಂತಿ ಲಲಿತತೆಯೆಮಗೆ ಸಲ್ಲ.
ರೋಮಾಂಚವಾಗುವೆದೆ ಕಲ್ಲಾದುದಲ್ಲ!
ಭೂಮಿತಾಯವಳ ಮಕ್ಕಳು ನಮ್ಮೊಳಿಲ್ಲ
ಸಾಮರಸ್ಯದ ಸುಳಿವು ಲವಲೇಶಮಿಲ್ಲ.

ಹುಲ್ಲೆ ಹುಲಿಯೊಡನಾಡಿದಾ ತಪೋವನದಾ,
ಕಲ್ಲು ಹೆಣ್ಣಾದುದರ, ಜಲಧಿ ಮಂಥನದಾ
ಎಲ್ಲ ತಿರುಳರಿವ ತಿಳಿ ನಂಬುಗೆಯ ನೀಡೈ!
ಬಲ್ಲವರ ಜಾಣ್ಮೆಯಾ ಸೋಗೆನಗೆ ಬೇಡೈ!

ಸಹಿಸದೈ, ಸಾಕು, ನವನಾಗರಿಕ ಭಾವ.
    ಮಹಿಯೊಳಿಹ ರೂಪರಸಗಂಧನಾದಗಳ
    ಸಹಜ ಸಾಮ್ರಾಜ್ಯದಲಿ ನಲಿವ ನಲವುಗಳ
ಸಿಹಿಯುಂಬ ಸರಳತೆಯ ಕರುಣಿಸೈ, ದೇವ!

## ೬ ಪದ್ಯ ರಚನೆ

(ಆಂಗ್ಲ ಕವಿತೆಯೊಂದರ ಆಧಾರದಿಂದ)

ಚುಂಬಿಸುತ ಮುದ್ದಾಡಿ ಹರಸಿ ಸರಸತಿಯು
ಬಿಂಬಿಸಲು ಮನದೊಳಗೆ ಅರೆಗಳಿಗೆ ಮತಿಯು
ಇಂಬಾಗಿ ಸುಖಕೆ ಹುರಿದುಂಬಲಾವೇಶಂ
ತಂಬೆಲರುಸುರಿನಂತೆ ಬಹುದು ಸಂದೇಶಂ

ಶಾರದೆಯು ನಗುತಿಹಳೆ ನಿರುತಂ? ಮುಖೇಂದು
ಬೀರುತಿರೆ ಚಿಂತೆಯಂ, ವ್ಯಾಕುಲದ ಬಿಂದು
ತೋರಿ ಹೊಂದಿರೆ ನಿನ್ನ ತ್ರಿಕರಣಗಳೊಳಗೆ
ಸೇರುವುದು ಭಾವಗಳ ರೂಪರಸಗಳಿಗೆ

ಶೋಕವೋ, ತೋಷವೋ, ಶಂಕಿಸಲು ಬೇಡ
ಸ್ವೀಕರಿಸು ಮನದಣಿಯೆ; ಜಾಣರನು ಗಾಢ
ಪ್ರೋಕನಾ ಹಾಡಿನಿಂ ಮರುಳುಗೊಳಿಸುವರಿ
ಆಕೆ ದಯಪಾಲಿಸುವ ವರವ ತೊರೆಯುವರೆ?

ಮನದೊಳಾಡಿಸಿ ತೂಗಿ ತಲೆಯೊಳತ್ತಿತ್ತ
ಇನಿದಾದ ರಸರಾಗದಿಂ ಬೆಳಗಿಸುತ್ತ
ಅನುನಯದ ಪದಗಳಿಂದರ್ಥವನು ಮೆರೆಸಿ
ಘನತತ್ತ್ವದರ್ಥದಿಂ ಶಬ್ದಗಳನುರಿಸಿ
ಬಂದು ಸಲಿವುದು ಕೇಳ್ಕೆ ದಿವ್ಯಕಾವ್ಯಂ
ಬಂಧುರಂ ಸುರುಚಿರಂ ಮೃದು ಹೃದ್ಯ ಪದ್ಯಂ.

## ಉಗ್ರಾಣ ಮಂಗೇಶರಾವ್

### ಆವುದಾ ಹಿತ ನಿನಗೆ ದೇವಿ ಭಾರತಿ ಹೇಳು

ಆವುದಾ ಹಿತ ನಿನಗೆ ದೇವಿ ಭಾರತಿ ಹೇಳು
ಕಾವ್ಯದಲಿ ಹೊಸ ಹಳೆಯು ಮಾರ್ಗವೆರಡರಲಿ.

ಎಳವೆಯನು ನೀನೆಲ್ಲಿ ಕಳೆದೆಯೋ ನಾ ಕಾಣೆ
ಬೆಳೆದೆ ವರಕವಿ **ಪಂಪ**ನೆದೆದೊಟ್ಟಿಲಲ್ಲಿ.
ನಡೆಗಲಿಸಿದನು ನಿನಗೆ ಪೊಡವಿಪತಿ **ನೃಪತುಂಗ**
ತೊಡಿಸಿದರು **ಹೊನ್ನ**ರನ್ನರು ಭೂಷಣವನು.

**ಗುಣವರ್ಮ**ನಿಂ ನಿನ್ನ ಗುಣವಧಿಕವಾದುದಾ
ಹಣೆಗೆ ತಿಲಕವನಿಟ್ಟರಾ ಕವಿತಿಲಕರು
**ನೇಮಿಚಂದ್ರ**ನು ನಿನ್ನ ನಾಮವನು ಬೆಳಗಿದನು
**ಕಾಮ**ನಿತ್ತನು ನಿನಗೊಲಿದು ರಸಿಕತೆಯನು.

**ಮಧುರ** ನಿನ್ನಯ ನುಡಿಗೆ ಮಧುರತೆಯನೆರೆದಿಹನು
ಸುಧೆಯನುಣಿಸುವೆ ನಿನ್ನನೆರೆದ ವಿಬುಧರಿಗೆ
ಕಂದ ವೃತ್ತಗಳಿಂದ ಚಂದ ರಗಳೆಗಳಿಂದ
ಬಂಧುರದ ನುಡಿಗಳಿಂದವರು ಹಾಡಿದರು.

ಮಡಿಯುವರ ನುಡಿ ಬಂಧಗೆಡದೆಂದಿಗೂ ಪ್ರಾಸ
ಗೆಡರವರು ಹಿಡಿದ ಮಾರ್ಗದೊಳೆ ನಡೆದಿಹರು.
ಮಾತಿನ ಚಮತ್ಕೃತಿಗೆ ರೀತಿಗೆಯಲಂಕೃತಿಗೆ
ಸೋತುದಿಲ್ಲವೆ ನಿನ್ನ ಮನಸು ಹೇಳಮ್ಮಾ.

ವರ ಚಂಪುವಿನ ಪೆಂಪು ಸರಸ ಷಟ್ಪದದಿಂಪು
ಸರಳ ವಚನದ ಸೊಂಪು ನಿನಗೊಪ್ಪದಿಹುದೇ.
ಕನ್ನಡದ ನುಡಿವೆಣ್ಣೆ ಮುನ್ನಿನಾ ಕವಿಗಳನು
ಮನ್ನಿಸಿದೆ ನಿನ್ನ ಕಡೆಗಣ್ಣೋಟದಿಂದೆ.

ಕಾಲಪುರುಷನ ಲೀಲೆ ಹೋಲಿಕೆಗೆ ಹೊರಗಹುದು
ಕಾಲೊಳೊರೆಸಿದನಿಲ್ಲ ಕೃತಿರತ್ನಗಳನು
ಬರೆದ ಕವಿಗಳನವರ ಪೊರೆದ ರಾಜರನೊಯ್ದು
ತೆರದೆ ಕಾಲನು ಕಬ್ಬಗಳನೊಯ್ದುದಿಲ್ಲ.

ಕಳೆಗೂಡಿದಾ ಕಬ್ಬವಿಳೆಯೊಳಗೆ ರಂಜಿಪುದು
ಹಳೆಯದಾಗದು ನಿಚ್ಚ ಹೊಸತಪ್ಪುದು.
ಬುಧರ ಹೃದಯವು ಬೇರೆ ವಿಧವಾದರೇನಾಯ್ತು
ಸುಧೆಗೆ ರುಚಿ ಬೇರಹುದೆ ಗುಣಕೆ ಮತ್ಸರವೇ.

ಅಂದಿಗದು ಚೆಲುವಾಯ್ತು ಕಂದಿತದನಿನ್ನೇಕೆ
ಮುಂದಿಯೋದುವುದೆಂದು ಕುಂದನಿಡಲಹುದೇ
ಸುಂದರದ ವಸ್ತುವಾನಂದವೀವುದು ಸದಾ
ಎಂದ ಕವಿವಚನವನು ನೀಂ ನಂಬದಿಹುದೇ.

ಕವಿತೆಯೊಳು ಹುಟ್ಟಿಹುದು ನವಮಾರ್ಗವಿದು ಮನಕೆ
ಸವಿಯಾಗದೇ?— ನೀನು, ನಸುನಗುವೆಯೇಕೆ?
ರವಿಯ ಕಣ್ಣಾಟದೊಳು ನವಪದಾರ್ಥವದಿಲ್ಲೆ
ರವಿ ಕಾಣದುದನು ತಾಂ ಕವಿ ಕಾಣದಿಹನೇ?

ಭಾಷೆಯು ಬಿಗುಪು ಹೋಯ್ತು ವೇಷ ಬದಲಾಯ್ತೆಮಗೆ
ತೋಷವಹುದೇ ಪೂರ್ವಸಂಪ್ರದಾಯದಲಿ.
ಭಾವವೇ ಜೀವವದನಾವರಿಸಿದಾ ದೇಹ
ಹಾವುದೆನೆ ಮಾತಲಂಕಾರವೇ ತೊಡಿಗೆ.

ಜೀವವೇ ಮುಖ್ಯವದನೋವದಿವರನು ಕಾಯೆ
ಪಾವನದ ತುಯ್ಯಲುಳಿದುಯ್ಯಲುಂಡಂತೆ.
ಒಡಲೆ ಕಾಣಿಸದಂತೆ ತೊಡಿಗೆಯನು ತೊಡಿಸಿದರೆ
ತಡೆಯದಪ್ಪುದು ನಿಜದ ಸಡೆದೊಡಲ ಸಿರಿಗೆ.

ಪ್ರಾಸವೇ ಪ್ರಾಣವಾ ಪ್ರಾಸವಳಿದರೆ ಕೃತಿಗೆ
ಲೇಸಹುದೆಯೆಂದದನೆ ಮೆಚ್ಚಲೇನಹುದು.
ಪ್ರಾಸವದು ಸಾಜದಿಂ ಸೂಸೆ ಭೂಷಣವಹುದು
ಸಾಸದಿಂ ಬರೆ ಕೃತಿಗೆ ದೋಷವಹುದಲ್ತೆ.

ಕಡು ಬಣ್ಣದಿಂ ಬಣ್ಣಗೆಡದಂತೆ ಭಾರದಾ
ತೊಡಿಗೆಯಿಂದೊಡಲು ಬಲು ಬಸವಳಿಯದಂತೆ.
ನುಡಿಯು ಬಿಗುಪಿಂ ಭಾವಗೆಡದಂತೆ ಹೃದಯವೇ
ನುಡಿದಂತೆ ನುಡಿದ ಕೃತಿ ನಿನಗೊಪ್ಪದಿಹುದೇ.

ಹಳಬರುನ್ನತ ವೃಕ್ಷಗಳನವರ ತೋಟದೊಳು
ಬೆಳಸಿದರು ಫಲವನುಣಿಸಿದರು ತಣಿಸಿದರು.
ಹೊಸಬರಭಿರುಚಿ ಬೇರೆ ಹಸನಾದ ಹೂದೋಟ
ವೆಸಗಿ ಹೂವಾಲೆಯನು ಹಾಕಿದರು ನಿನಗೆ.

ಅರರೆ ಗುಣದೋಷಗಳು ಭರಿತವಿಹವೆರಡರೊಳು
ಕೊರತೆಯಿಲ್ಲದ ವಸ್ತು ಧರೆಯೊಳೆಲ್ಲಿಹುದು?
ಎಮಗೆ ಹಳತೇ ಮೆಚ್ಚು ತಮಗೆ ಹೊಸತೇ ಹೆಚ್ಚು.
ಅಮಮ! ಏತಕೆ ಹುಚ್ಚು ನಿಮಗೆಂಬೆ ನೀನು.

ಬಗೆಯೆ ಹೊಸ ಹಳೆಯೆಂಬ ಜಗಳದೊಳು ಹುರುಳಿಲ್ಲ
ನಗುವೆ ನೀನೆರಡು ಕಡೆಯವರೆಗ್ಗತನಕೆ.
ಹೊಸತೇನು ಹಳತೇನು ರಸವನೊಸರುವ ಕಬ್ಬ
ರಸದಾಳಿ ಕಬ್ಬಹುದು ನಿನಗೊಪ್ಪದಿಹುದೇ.

## ೨ ಎನ್ನ ಮುದ್ದಿನ ಗಿಣಿಯೆ!

ಎನ್ನ ಮುದ್ದಿನ ಗಿಣಿಯೆ! ಎನ್ನ ಸೊಬಗಿನ ಕಣಿಯೆ!
ಎನ್ನ ಭಾಗ್ಯದ ಸಿರಿಯೆ! ಚೆಲುವಿನ ಕುವರಿಯೆ!
ನಿನ್ನ ಜನನದ ದಿನಕೆ—(ಚೆನ್ನಾಯ್ತೆಲೆಗೆ! ಮನಕೆ
ಸನ್ನುತವೆ? ತಡೆ ಮಗಳ ಈ ಕಿರುಕುಳಗಳ.)

ಬಾರೆನ್ನ ಮನೆ ಬೆಳಗೆ! ಸಾರು ಬೇಗನೆ ಬಳಿಗೆ;
ತೋರು ನಿನ್ನಯ ಮೊಗವ; ಬೀರೆನಗೆ ಸೊಗವ.
ವಿಹಾರಿಹುದು ಸುಖವಿಂದು—(ಯಾರೆ? ಬೇಗನೆ ಬಂದು
ನೀರ ಬಿಂದಿಗೆ ಎಳಕೊ! ಹೋ! ಕವಚಿದಳಕೊ!)

ಕಂದ! ಜನನದ ದಿನದ ಸಂದ ನಿನ್ನಯು ಬಿನದ
ದಿಂದ ನಲವಾಂತುದೆದೆ ಬಂದಪ್ಪು ಮುದದೆ.
ನಿಂದು ನೋಡುವುದೇಕೆ?—(ಮುಂದೋಡಿದಳು! ಜೋಕೆ!
ಸುಂದರಿಯೆ! ಪೋ ಪೋಗು! ಹಾಕಿದಳು ಲಾಗು!)

ಮಗಳೆ! ಮಾಣಿಕಗೊಂಬೆ! ತೆಗೆದು ತಕ್ಕಿಸಿಕೊಂಬೆ!
ನಗುನಗುತ ಬಾರೆನ್ನ ಬಗೆಗೊಳಿಪ ರನ್ನ!
ಸಿಗಲಾರೆಯಾ ನನಗೆ—(ನೆಗೆದಳಿದೊ ಕಿರುಮನೆಗೆ
ತೆಗೆದೆನ್ನ ಮುಸಿಕುಡಿಕೆ! ಬೇಗವಳ ಹುಡುಕೆ!)

ಪುಟ್ಟಮ್ಮ! ನೀ ಮುತ್ತ ಕೊಟ್ಟೆನ್ನನಪ್ಪುತ್ತ
ಹುಟ್ಟು ದಿನದುಡುಗೊರೆಯ ಪಡೆಯಬಹುದರಿಯು!
ತಟ್ಟನಿಲ್ಲಿಗೆ ಬಾರೆ—(ಬೊಟ್ಟಿಟ್ಟವಳ ಮೋರೆ
ನಿಟ್ಟಿಸೆಲೆ ಮನದನ್ನೆ! ಮುಸಿಗಾಯ್ತು ಸೊನ್ನೆ!)

ಅಮ್ಮಣ್ಣಿ! ಬಾ, ನಿನ್ನನೊಮ್ಮೆ ತಬ್ಬುವೆ, ಚಿನ್ನ
ಸುಮ್ಮಾನವಹುದಿಂದು ಜನ್ಮದಿನವೆಂದು.
ಸಮ್ಮುಖಕೆ ಬಾ, ಪುರುಳೆ!—(ಸುಮ್ಮನಿರಳೀ ತರಳೆ;
ಗುಮ್ಮನೆಂದಿದೊ ಬಂದಳೇನದರ ಚಂದ!)

ಕಡುಬೆಡಗಿನೆಲೆ ಬಾಲೆ! ಇಡುವೆ ಮುತ್ತಿನ ಮಾಲೆ
ಬಿಡೆನಿದಕೊ ಸಿಕ್ಕಿದಳು! ಮುತ್ತನಿಕ್ಕಿದಳು!
ಒಡನೆ ಮುದ್ದಾಡಿದೆನು—(ಮಡದಿಮಣಿ, ನೋಡಿದನು.
ಬೆಡಗಲ್ಲವೇ ಪೇಳೆ ಮುತ್ತಿನೀ ಮಾಲೆ?)

## ೨ ಕಲಾಮಹಿಮೆ

ನೀರನೀರೆಯರಂದು ಬೇರಾಗಲಿಹುದೆಂದು
ಸಾರಿ ಮನದಣಿಯೆ ಮುದ್ದಾಡುತಗಲಿದರು,—
ದೂರದಲಿ ನಿಂದ ಕವಿಯೆದೆಯೊಳಿದು ಸೇರಿ, ನಿಲ
ಲಾರದೊಡನೊಂದು ಹಾಡಾಗಿ ರಂಜಿಸಿತು.

ತರಣಿ ಪಡುವಣಕಿಳಿದು, ಕೆಂಬಣ್ಣದಿಂ ಪೊಳೆದು,
ಕಿರಣಗಳ ಸಿರಿಯು ಕಡಲೊಳು ಕರೆದು ಮೆರೆದಂ,—
ನೆರೆದ ಸಂಜೆಯ ಸೊಬಗ ನೋಡಿ ಸಂತಸಗೂಡಿ
ಬರೆದನದರೊಂದು ಚಿತ್ರವನು ಚಿತ್ರಕನು.

ಅಳುವ ಮಗುವನು ಪಿಡಿದು ಬಿಗಿದಪ್ಪಿ ಲಾಲಿಸುತ,
ಕಳಕಂಠೆ ಮನಕೆ ಬಂದಂತೆ ಹಾಡಿದಳು.—
ಬಳಿಯೊಳಿರ್ದೋರ್ವ ಗಾಯಕನದರ ಸವಿಗೊಲಿದು
ಕಳೆದುಂಬಿ ನುಡಿಗಳಿಗೆ ರಾಗಗಟ್ಟಿದನು.

ಅಡಿಯಿಂದ ಮುಡಿಯುನಕ ಕಡುಚೆಲುವೆಯುಹ ಮಡದಿ
ನುಡಿಯುತಿರ್ದಾಳು ತನ್ನ ಕೈಯ ಗಿಣಿಯೊಡನೆ—
ನಡೆನೋಡಿಯುವಳ ಚೆಲುವಿಗೆ ಸೋತ ವರಶಿಲ್ಪಿ
ಪಡಿಯೊಡಲನೊಂದು ಶಿಲೆಗಡಿದು ಮಾಡಿದನು.

ರಸಿಕರೆದೆಗೂಡಿ ಹಸನಾಗಿ ನೆಲಸಿತು ಹಾಡು;
ಕಿಸುಸಂಜೆ ಸೊಬಗು ಚಿತ್ರದೊಳೆಸೆದುದನಿಶಂ;
ಬಿಸಜಾಕ್ಷಿಯುರ ಬಾಯೊಳುಳಿದಿಹುದು ರಾಗವದು;
ನಸುಗೆಡದೆ ನಿಂದಿತರೆಯೊಳು ಪೆಣ್ಣ ಚೆಲುವು.

ಸೀರನೀರೆಯುರ, ಕವಿರವಿವರ್ಣಗಳ, ಚಿತ್ರ
ಕಾರಗಾಯಕರಾಗರೂಪಶಿಲ್ಪಿಗಳ,
ಧಾರಿಣಿಯನೇ ಸೃಷ್ಟಿಸಿದ ಶಿಲ್ಪಿವರ್ಯನವ
ನಾರಯಿದು ನೋಡಿ ಮನಮೆಚ್ಚಿ ಹರಸಿದನು.

ಲೋಕವಿದು ದುಃಖಮಯುವೆಂಬುದದು ನಿಜವಹುದು.
ನಾಕಸುಖವಿದರೊಳಿರಬೇಕೆಂದರಹುದೇ?
ಶೋಕಿಸದೆ, ಸುಖಬಿಂದುಗಳ ಚೆಲ್ಲಗೊಡದೆ, ಸುವಿ
ವೇಕದಿಂದಿಂತು ಕಲೆಯೊಳಗಿ ಚಿರಗೊಳಿಸೈ.

---

## ಎಮ್. ನರಸಿಂಗರಾವ್

### ೧ ಉವಏಸ-ರಯಣ-ಮಾಲಂ

(ಉಪದೇಶ-ರತ್ನಮಾಲಾ)

ಪದ್ಮಜಿನೇಶ್ವರ ಸೂರಿಯ ಪ್ರಾಕೃತ ಗಾಥೆಯ ಅನುವಾದ.

ಕಂದಂ

ಈಶ ಮಹಾವೀರಗೆರಗಿ,
ಕೋಶವನುಪದೇಶ-ರತ್ನದಾ ಪೇಳ್ವೆಂ, ನಿ-
ಶ್ಶೇಷಂ ಲೋಗರ ದುರ್ಗತಿ
ನಾಶಂಗೆಯ್ವುದುಪದೇಶ-ರತ್ನದ ಮಾಲೇ.

ಜೀವದಯೆಯೊಳ್ ರಮಿಪ್ಪುದು,
ಗೋವರ್ಗವನುಂ ದಮಿಪ್ಪುದೈ, ಸತ್ಯಪ್ರ-
ಸ್ತಾವದ ವಚನವನೊರೆವುದು,
ಪಾವನ ಧರ್ಮದ ರಹಸ್ಯಮಿನಿತರೊಳಿಲ್ತೆ?

ಶೀಲಂ ಖಂಡಿಸದಿರ್, ದು-
ಶ್ಶೀಲರನೊಡನಾಡವೇಡ, ಗುರುವಚನಗಳಂ
ಕಾಲಿಯನೆಸಗಲ್ ವೇಡಾ,
ಮೇಲೆನಲರಿದಪೆ ಸುಧರ್ಮಪರಮಾರ್ಥವನುಂ.

ಅಡಿಯಿಡುವೆಡೆಯೊಳ್ ಚಪಲಂ-
ವಡೆಯುದುಡಿಗೆಯೊಳ್ ವಿರಜಿಸದುದ್ಭಟವೇಷಂ
ಕಡುವಕ್ರಂ ನೋಡದೆ ನಡೆ-
ದೊಡೆ, ತಾವೊಂದಂ ನುಡಿವರೆ ರುಷ್ಟರ್ ಪಿಸುಣರ್?

ನಿಯಮಿಪುದು ಜಿಹ್ವೆಯಂ, ಕಾ-
ರಿಯಕಂ ಕೈಯಿಕ್ಕದಿರ್ ವಿಚಾರವನುಳಿದುಂ,
ಬಯಲಿಸದಿರ್ಕುಲಕರ್ಮದ
ನಿಯತವನೇಗೆಯ್ವುದಾ ಕಠಿನ ಕಲಿಕಾಲಂ?

ಆಚಾರ ಮಾರ್ಗವನ್ನರೆ
ಸಾರದಲಾರಂ ಟೊಣೆಯದೆ ಜರೆಯದಿರಲ್ಕಂ-
ತೋರಂತೆ ನಡೆಯೆ, ದುರ್ಗದ
ದಾರಿಯನುಂ ಸಜ್ಜನರ್ಗೆ ಸುಕರಿಪುದಲ್ತೇ?

ಉಪಕರಿಪುದೆಲ್ಲರಂ, ಪರ-
ರುಪಕಾರವನುಂ ಮರೆಯದಲಿರ್, ವಿಹ್ವಲರಂ
ಕೃಪೆಯಿಂ ಕರನುವಲಂಬಿಪು-
ದುಪದೇಶಂ ಪರಮಮಿದುವೆ ವಿದುಷರದಲ್ತೆ?

ಆವನನುಂ ಬೇಡಲ್ವೇ-
ಡಾವನ ಪ್ರಸ್ಥಾನಭಂಗವಂ ಗೆಯ್ಯಲ್ವೇ-
ಡಾ! ವಚನದೈನ್ಯಮುಂ ಬಿಡೆ,
ಯಾವಜ್ಜೀವಂ ಬರ್ದುಂಕಲಕ್ಕುಂ ಜಗದೊಳ್.

ತನ್ನಂ ತಾನೆ ಪ್ರಶಂಸಿಸ-
ದಿನ್ನಾರಂ ನಿಂದಿಸದುರೆ ದುರ್ಜನನೆಂದುಂ,
ಮುನ್ನಂ ಬಹುಬಹು ಗಹಗಹಿ-
ಪನ್ನಂ ನಗದಿರ್, ಲಭಿಪುದು ಗೌರವಮಿದರಿಂ.

ಪಗೆಗಳೊಳಿಡಲಾಗದು ನಂ-
ಬುಗೆಯಂ, ವಿಶ್ವಸ್ತರೆಂಬರೊಳ್ವಂಚನೆಯಂ
ಬಗೆಗೊಳದಿರ್ಕೆ. ಕೃತಘ್ನತೆ-
ಯ ಗುಣಂ ಮೆರೆಯಿಸದಿರಿದುವೆ ನ್ಯಾಯದ ಮಾರ್ಗಂ.

ಸುಗುಣಿಗಳೊಡನಾಟವೆ ರಮಿ-
ಸುಗೆ, ರಾಗಂ ಸ್ನೇಹವರ್ಜ್ಯರೊಳ್ ವರ್ಜಿಸುತುಂ,
ಮಿಗೆ ಪಾತ್ರಾಪಾತ್ರವಿಚಾ-
ರಗಳಂ ಪರಿಕಿಸಿ ನಡೆವುದೆ ಬಲ್ಲವರೊರೆಗಲ್.

ಮಾಡದಿರಕಾರ್ಯವಂ, ತಾ-
ಸೀಡಾಗಲ್ವೇಡ ಕಿಡುನುಡಿಜಸಕ್ಕಂ, ನೀ-
ಗಾಡ್ಯೆ ಸಾಹಸವಂ, ಕೈ-
ಮಾಡದಲಿರ್ಕ್ಕುಮೆ ಜಗತ್ತು ಮೂರಂ ಬಳಿಸಲ್?

ವ್ಯಸನದೆ ವ್ಯಥೆವೇಡಾ, ಮಾ-
ಣಿಸದಿರ್ ಗಡ ಸ್ವಾಭಿಮಾನವಂ ಸಾಯ್ವನಕಂ,
ದಸೆಗೆಟ್ಟಿರ್ದೊಡಮಾಯ್ಕೆ-
ಯಸಿಧಾರಾವ್ರತಮಿದಲ್ತೆ ಧೀರರ್ಕಳ್ಗಂ?

ಅತಿನೇಹವಸುಂ ಪ್ರಿಯರೊಳ್
ಪ್ರತಿದಿವಸಂ ರೋಷವನುರೆ ತೋರಲ್ ವೇಡಾ,
ಮಥಿಸಲ್ವೇಡ ಕಲಹವಂ,
ಗತಿವೊಂದಿಪ್ಪುದು ಜಲಾಂಜಲಿಯಿನರಿಗುಣಕಂ.

ವಶವಾಗದಿರ್ ಕುಸಂಗಕೆ,
ಶಿಶುಮುಖದಿಂದಾದೊಡಂ ಹಿತವಚನವಂ ಲಾ-
ಲಿಸಲಕ್ಕುಂ, ತೊರೆಯಸಯದ
ಗಸಣಿಯನೆಂದೆನೆ ಮಿಸುಕದು ನಿಂದಾವಚನಂ.

ವಿಭವದೊಳುಬ್ಬರ್ಲ್ಕಾಗದ-
ಶುಭಮುಪ್ಪ ವಿಪತ್ತಿನೊಳ್ ವಿಷಾದಂ ಬಿಡು, ಮೇ-
ಣುಭಯದೆ ಪ್ರವರ್ತಿಸಿರ್ಕ್ಕೆ ಸ-
ಮಭಾವದೊಳ್, ಪುಟ್ಟದು ರಣರಣ ಸಂತಾಪಂ.

ಪೊಗಳಲ್ವೇಡಾ ಭೃತ್ಯಗು-
ಣಗಣಂಗಳನುಂ ಪರೋಕ್ಷದೊಳ್, ಸುತಗುಣವಂ
ಮಿಗೆ ಪ್ರತ್ಯಕ್ಷದಿ, ಮಹಿಳೆಯು-
ರ ಗುಣವನುಭಯದಿ; ನಶಿಸದವರ್ಗೆ ಮಹತ್ತ್ವಂ.

ಪ್ರಿಯವಚನವನಾಡುತ್ತೆ, ವಿ-
ನಯದಿಂ ನಡೆಯುತ್ತೆ, ಕುಡುತ್ತೆ ದಾನಂಗಳನೊ-
ಲ್ಮೆಯಿನರಿ ಪರಗುಣದಾ ಸಂ-
ಚಯವನಿದೆ ವಶೀಕರಣದನುಾಲ್ಪ ಸುಮಂತ್ರಂ.

ನುಡಿ ಪ್ರಸ್ತಾವದೆ, ಮನ್ನಣೆ-
ಗುಡು ಖಳನಿಂಗಾವೊಡಂ ಜನಸಭೆಯೊಳುರೆ ಕೈ-
ವಿಡದಿರ್ ಸ್ವಪರ ವಿಶೇಷಂ,
ಪಡೆದಪೆಯಿದರಿಂ ಮನೋರಥಂಗಳನೆಲ್ಲಂ.

ಆಗಲಿರ್ಪುದು ಮಂತ್ರತಾ-
ಣಗಳಂ, ಗಡ, ಜತೆಯೊಳಲ್ಲದಲೆ ಪರಗೃಹಮಂ
ಪುಗದಿರ್, ನೀನಿತ್ತಾ ಬಾ-
ಸೆಗಳಂ ಪಾಲಿಪುದು; ಪಡೆದಪೆ ಕುಲೀನತ್ವಂ.

ಕರೆ ಪೋ ಭೋಜನಕಂ, ಮೇ-
ಣರಿದರಿಪುವುದೈ ಮನೋಗತವನುಮುರೆ ಪರ-
ಸ್ಪರದಿಂ, ಕುಡುಕೊಳುಚಿತಮನ-
ವರತಂ, ನೀ[illegible]ಚ್ಛಿಪೆಯೆನೆ ಸ್ಥಿರಸುಪ್ರೇಮಂ.

ಅವಮಾನಿಸಲರಿದಾರಂ,
ತವನಿಜಗುಣವಂ ಪೊಗಳುತೆ ಗರ್ವಿಸವೇಡಾ,
ತವೆ ವಿಸ್ಮಯಂಗೊಳಲ್ವೇ-
ಡ, ವಿಚಾರಿಪ್ಪುದು ಗಡ! 'ಬಹುರತ್ನಾ ಪೃಥ್ವೀ!'

ಲಘುವಂ ಪ್ರಾರಂಭಿಸುತುಂ,
ಒಗೆಯಲ್ವೇಳ್ಕುಂ ಮಹತ್ತಮುಮೆನಿಪ್ಪುದನುಂ,
ನೆಗೆಯುದಿರುತ್ಕಂಠಂ ಕ-
ಜ್ಜಗಳೊಳ್: ಸುಲಭದೆ ಪಡೆದಪೆ ಗೌರವಮಿದರಿಂ

ಪರಮಾತ್ಮನ ಜಾನಿಸುತುಂ,
ಪರರಂ ಗಣಿಸಾಪ್ತಸಮರೆನಲ್ ನಲವಿಂದಂ,
ಕೊರಗಿಸಿ ರಾಗದ್ವೇಷವ-
ನುರೆ, ನೀಂ ಸಂಸಾರಬಂಧನಂ ಛಿಂದಿಸಿಕೊಳ್.

ಈವುಪದೇಶ-ಮಣಿಸರವ-
ನಾವಂ ಕಂಠದೆ ಧರಿಪನನವರತಮವನಾ-
ಜೀವಾಂತಂ ಶಿವಸುಖ-ಲ-
ಕ್ಷ್ಮೀವಕ್ಷಃಸ್ಥಲದೊಳೆ ನಲಿದಾಡುತ್ತಿರ್ಪಂ!

ನೇರಂ ಪದ್ಮಜಿನೇಶ್ವರ-
ಸೂರಿಯೆ ಕೋದಿರ್ದ ರಮ್ಯ ವಚನದ ಗುಂಫಂ
ಸಾರವಿಪುಲೋಪದೇಶದ
ಹಾರಂ ಕಂಠಗತಮಕ್ಕೆ ಭವ್ಯಜನರ್ಗಂ!

# ೨ ಯತಿ

(ಪಾರ್ನೆಲ್ ಕವಿಯ "ಹರ್ಮಿಟ್" ಎಂಬ ಕಾವ್ಯದ ಸಂವಿಧಾನ.)

(ಧಾಟಿ—ಲಾವಣಿ; ೮-೮-೧೦)

ಧರಾಧರಧರಂ,-
ಮುರಾಸುರಹರಂ,-
ಚರಾಚರವರಂ,-
ಪರಾತ್ಪರಪರಂ! ॥ ಪಲ್ಲ ॥

I.

ವಯೋವೃದ್ಧ ಚಿ-ನ್ಮಯಾಹ್ವಯಂ ಯೋ-ಗಿಯಿರ್ದನತಿಕಾಲಂ,
ಭಯಂಕರ ವಿಪಿನ-ದೆಯೇಕನಾಗಿರೆ,-ಸ್ವಯಂಶಾಂತಿತೃಪ್ತಂ.

ಹಣ್ಣುಹಂಪಲ-ನ್ನುಣ್ಣುತ ಕೆಲದಿಹ-ದಿಣ್ಣೆಯ ಜರಿಯಿಂದಂ
ತಣ್ಣೀರ್ಕುಡಿವನು,- ನುಣ್ಣೆಲೆ ಹಾಸುಗೆ,-ಸಣ್ಣ ಗವಿಯೆ ಭವನಂ.

ಪರಬ್ರಹ್ಮಸು-ಸ್ವರೂಪನಹ ಶ್ರೀ-ಹರಿಧ್ಯಾನವನ್ನೂ
ಸರಾಗದಿಂದೆ ದಿ-ನರಾತ್ರಿ ಮಾಡುವ-ನರೋತ್ತಮನೆ ತಾನೂ.

ಒಂದು ಸಂಶಯಂ-ಬಂದು ಮುಸುಕಿತಾ- ನಂದಚಿತ್ತಕವನಾ,
ಚಂದಿರಬಿಂಬಕೆ-ಮುಂದೆ ಕಾರ್ಮುಗಿಲ-ಸಂದಣಿ ಬರುವಂತೇ,

ತಿಳಿಯು ಕೊಳದೊಳಗೆ-ಬಳಿಯ ದಡವು ಮರ-ಗಳು, ನೇಸರು, ಬಾನೂ
ಪೊಳೆಯೆ, ಕಿರಿಯ ಕ-ಲ್ಲುಸಳಿಯೆ, ನೆಳಲ್ಗಳು-ಚಳವಳಗೊಳುವಂತೇ.

'ಇಷ್ಟು ನಡೆಸುತಿಹ-ಸೃಷ್ಟಿಪಾಲನೀ-ವಿಷ್ಣುವೆ ಪರಮಾತ್ಮಾ,
ದುಷ್ಟನಿಗಿಷ್ಟವ,-ಶಿಷ್ಟಗೆ ಕಷ್ಟವ,-ವೇಷ್ಟಿಪುದೇಂ ಚೇಷ್ಟೇ?'

ಅಹೋರಾತ್ರಿಯಿಾ-ರಹಸ್ಯವಿದೆ! ನಿ ಸ್ಸಹಾಯನಾಗಿರ್ದೂ,
ಗುಹಾಚಿಂತನದಿ-ಮಹಾಪವಾದಾ-ಪಹಾರವೆಲ್ಲಿಹುದೂ?

ಇಂತು ಸಂಶಯದ-ಚಿಂತೆಯನುಂ ತಾ-ಮುಂಥನಗೆಯ್ಯಲ್ಕೇ,
ಸಂತನು ಪೊರಟನು,-ಸ್ವಂತದ ದಂಡವ-ಕಂಥೆಯನೊಡಗೂಡೀ.

## II

ಮುಂದೆ ಕಂಡನವ-ನಂದಿನ ದಿನದತಿ-ಸುಂದರ ತರುಣನನೂ,
ಸಂದುದು ಮಾತುಗ-ಳಿಂದರೆದಾರಿಯು;-ಸಂಧ್ಯೆಯಾಯ್ತು ಕೊನೆಗೇ.

ಆಗಳ್ಕಂಡರು-ಬಾಗಿಲ ತೆರೆದಿಹ-ಸೋಗಿನ ಮಂದಿರವಾ;
ಬೇಗನೆ ಧನಿಯಿದಿ-ರಾಗಿ ಬಂದವರ-ಸ್ವಾಗತಕರಿಸಿದನೂ.

ಅಲಂಕಾರದು-ಜ್ಜ್ವಲಾನ್ವಿತಂ ವಿಧು-ಶಿಲಾಶಾಲೆಯಲ್ಲೀ,
ಬಲಾತ್ಕಾರದಿಂ-ದಲಾಯ್ತು ಭೋಜನ-ಫಲಾಹಾರ ಮೊದಲೂ.

ಸುರಭಿಸುರತರುಗ-ಳಿರುವುವಿಲ್ಲಿಯೆಂ-ಬರುಹು ಜನಿಸುತಿರಲೂ,
ಪರಿಪರಿ ಭಕ್ಷ್ಯವ-ವರ ಭೋಜ್ಯಾನ್ನವ-ನಿರದೆ ಭುಂಜಿಸಿದರೂ.

ಮೃದುಲ ಹಂಸತೂ-ಲದ ತಲ್ಪದೆ ಬಹು-ಮುದದಿ ನಿದ್ರೆಗೆಯ್ದೂ,
ಉದಯದೊಳೇಳ-ಲ್ಕೊದಗಿಸಿದವುತಣ-ವದು ಸತ್ಕರಿಸಿದುದೂ.

ಹೊನ್ನ ದಾನಿಯಾ-ಪನ್ನೀರಿಂದವ-ರನ್ನಾ ಶ್ರೀಮಂತಂ
ಚೆನ್ನನೆ ನನೆಯಿಸಿ,-ತನ್ನಯ ನೆನಪಿರ-ಲೆನ್ನುತ ಬೀಳ್ಕೊಟ್ಟಂ.

ಮೂರು ನೂರರಾ-ದೂರ ದಾರಿಗಿ-ನ್ನಾರು ಕಾಣದಂತೇ,
ಹಾರಿಸಿರ್ದ ಪ-ನ್ನೀರದಾನಿಯಂ-ತೋರಿಸಿದಂ ತರುಣಂ.

ತಣ್ಣಗಾಗೆ ಮೈ,-ಕಣ್ಣು ಮೋರೆ ಕೆಂ-ಬಣ್ಣವೇರೆ, ಯತಿಗೇ,
ಉಣ್ಣೆಯೆದ್ದು ನಿಲೆ,-ಕರ್ಣ ಸಿಡಿಯಿತಾ-ರಣ್ಯವಾಯ್ತು ಮನವೂ.

## III.

ಸುಮ್ಮನಿರ್ದು, ಬಲು-ದುಮ್ಮಾನದ ಮುನಿ-ಸಂ ಮನದೊಳಗಿರಿಸೀ,
ಹಿಮ್ಮೆಟ್ಟದೆ ನಡೆ-ದಂ ಮುನಿ ತರುಣನ-ಸಮ್ಮೇಳನದಿಂದಂ.

ಸಿಡಿಲು ಜಡಿಗಳೆಡೆ-ಬಿಡದೆ ಹೊಡೆಯೆ, ತುಡು-ಕಿಡೆ ತೊಡಗಿತು ಬಾನೂ,
ಒಡನೆ ಬಿಸಿಗದಿರ-ನಡಗೆಯಿರುಳು ತಲೆ-ಯಿಡಲೆಡೆ ಪುಡುಕಿದರೂ.

ಕಂಡರಾಗಳು-ದ್ದಂಡ ಸೌಧವಾ-ಖಂಡಲದಿಙ್ಮುಖದೇ;
ತಂಡದಿ ಬಂಜರು-ಗೊಂಡಿದೆ ಸುತ್ತಲು,-ಬಂಡೆಮಂಡೆಯಂತೇ.

ಕಟಕಟ ಕದವಾ-ಭರ್ಟಿಸಿ ತಟ್ಟೆ, ಮೇ-ಲ್ಕಿಟಿಕಿಯಿಂದೆ ಹಣಿಕೀ,
ಕಟುಮುಖದಾ ಕ-ರ್ಪಟಿಕನು ಕರೆದನು-ಪಟಲವಿದೆಂಬವೊಲೂ.

ಪರೋಪಕಾರದೆ-ನಿರಸ್ತನಹ ಧನ-ಪರಾಯಣಂ ಕೃಪಣಂ,
ದುರುಕ್ತಿಲ್ಲ ಮಂ-ದಿರಂ, ಭೋಜನಂ-ಪರಿಷ್ಕಾರಮುಲ್ಲಾ.

ಕಲ್ಲ ಮೇಲೆ ಬರಿ-ಹುಲ್ಲು ಹಾಸಿಯುದ-ರಲ್ಲಿ ಮಲಗಿಸಿದನೂ,
ಅಲ್ಲಿನಸುದಯಿಸ-ಲಿಲ್ಲದ ಮುನ್ನಮೆ-ಮೆಲ್ಲನೆಚ್ಚರಿಸಿದಂ.

ಪೊರಡಲಿರ್ವರುಂ,-ತರುಣನು ವರಕ-ಬುರರದಾಸಿಯುನೆತ್ತೀ,-
ಕರುಣಾರಹಿತನ-ಕರದೊಳಗಿಟ್ಟು-ಕ್ಕರೆಯೊಳಪ್ಪಿಕೊಂಡಂ.

ದಿಟ್ಟಿಸಿ ಬಿಟ್ಟನು-ನಿಟ್ಟುಸಿರಂ ಯತಿ,-ಪಟ್ಟನು ವಿಸ್ಮಯಮಂ.
ನೆಟ್ಟನೆ ಸುಜನನ-ಬಟ್ಟಲ ಕದ್ದೀ-ದಿಟ್ಟಗೆ ಕೊಟ್ಟನಲಾ!

## IV.

ದಾರಿ ನಡೆಯೆ ಹರ-ದಾರಿಯಾರು, ಕುಮು-ದಾರಿಯುಡಗುತಿರ್ದಂ,
ದಾರಿದ್ರ್ಯತಪಮು-ದಾರಿ ಮುಖೇನ ಸು-ದಾರಿಸಿ ಮುಸುಳ್ವಂತೇ.

ಬದಿಗೆ ಕಂಡರಾ-ಸದನವನತಿ ಭಾ-ಸ್ವದಮುಲಬಂಧುರವಾ,
ವಿದಿತಮುಪ್ಪ ಕೃಷಿ-ಯುದಧಿಮಧ್ಯದೊಳ-ಗೊದವಿದ ದ್ವೀಪದೊಲೂ.

'ಬನ್ನಿರಿತ್ತ, ಸಂ-ಪನ್ನರೆ! ಶ್ರೀಹರಿ-ಯೆನ್ನ ಪಾಲಿಗಿತ್ತಾ
ಹೊನ್ನೆಲ್ಲಕೆ ನೀ-ವಿನ್ನು ಭಾಗಿಗಳು,-ಮನ್ನಿಸಿರೆನು'ತೊಡೆಯಂ,

ಪರಿಭಜನೆಯು ಗೆ-ಯ್ದೆರಡು ಗಳಿಗೆ, ಸ-ತ್ಕರಿಸಿದನತಿಥಿಗಳಂ;
ಭರದಲಿ ನಿರ್ಮಲ-ತರ ರುಚಿಬಲಹಿತ-ಕರಭೋಜನದಿಂದಂ.

ತಾಂಬೂಲಂ ಕೊ-ಟ್ಟುಂ, ಬ್ರಹ್ಮಜ್ಞಾ-ನಂ ಭಕ್ತಿಯಿನರಿದೂ,
ಇಂಬಿನ ಶಯ್ಯೆಯೊ-ಳುಂ ಬಿಟ್ಟನದಾ-ಡಂಬರಮಿನಿತಿಲ್ಲಾ!

ಪ್ರಾತಃಕಾಲದೊ-ಳಾತರುಣಂ ತಾ-ಮಾತಾಡದಲೆದ್ದೂ,
ಆ ತೊಟ್ಟಿಲೊಳಿಹ-ನೂತನ ಶಿಶುವಿನ-ಚೇತನ ಘಾತಿಸಿದಂ.

ಕೃಪಾವಿಷ್ಟನಹ-ತಪೋನಿಷ್ಠನೀ-ಪ್ರಪಾತವನು ಕಂಡೂ,
ವಿಪತ್ತು ಬಂತು ವ-ಧಪಾತಕದೆನುತ,-ಕಪಾಲವಂ ಬಡಿದಂ.

ಏನರಿಯುದ ಯಜ-ಮಾನನವರ ಸ-ನ್ಮಾನದಿಂದಲುಣಿಸೀ,
ಕಾನನ ದಾಟಿಸಿ-ನೀನು ಮರಳೆನುತ-ದೀನ ಭೃತ್ಯಕೊರೆದಂ.

## V.

ಒಡೆಯನ ಬೀಳ್ಕೊಂ-ಡೊಡನೆ ನಡೆಯೆ, ಮುಂ-ದಡವಿಯ ನಡುವಿನಲೀ
ತಡೆಯದೆ ಯುವಕನು-ಬಡ ಸೇವಕನನು-ಮಡುವೊಳು ಕೆಡಹಿದನು.

ಸಿಟ್ಟಿಡರಲು, ಕಂ-ಗೆಟ್ಟು, ಕೊರಳೊಳ್-ಕ್ಕಟ್ಟು ಕಟ್ಟೆ, ಯತಿಗೇ
ಪುಟ್ಟೆ ಬೆವರು, ಹಿ-ಮ್ಮೆಟ್ಟಿತು ತಾಳ್ಮೆಯು,-ಜುಟ್ಟ ಪಿಡಿವುತೆಂದಂ.—

'ಚಂಡಾಲನೆ! ಮುಂ-ಕೊಂಡು ಸುಲಿದೆಯಾ-ಮಂಡಲೇಶನನ್ನೂ?
ಉಂಡ ಮನೆಗೆರಡ,-ಭಂಡನೆ, ಬಗೆದಿಯೆ?-ಗಂಡುವುಂಟೆ ನಿನಗೇ?

'ಉಪಾಂಶುಹೃತ ಹೇ-ಮಪಾತ್ರವಂ ನೀ-ನಪಾತ್ರ ಕೃಪಣನಿಗೇ
ಅಪಾರಮುಪ್ಪ ದು-ರುಪೇಕ್ಷೆಯಿಂದಲಿ-ಯುಪಪ್ರದಿಸಿದೆಯಲಾ!

'ಅರ್ಭಕಕಂಠವ-ನಿರ್ಬದಿಯಲಿ ಕರ-ನಿರ್ಭರದಿಂದೊತ್ತೀ
ದುರ್ಭರ ಮೃತಿಯಾ-ವರ್ಭವಿಸಿದೆಯೆಂ-ದಾರ್ಭಟವೆತ್ತಿದನೂ.

'ಬಂಟನ ನೂಂಕಿದೆ-ಕುಂಟೆ ನೀರೊಳ್ಗಂ-ತುಂಟೆ ಮಹಾ ಪಾಪಂ?
ಶುಂಠನೆ! ನಿನ್ನಯ-ಗಂಟಲ ಮುರಿವೆನ-ಕಂಟಕನಾಗಿಪೆನೂ.'

ಇಂತು ಗರ್ಜಿಸು-ತ್ತುಂ ತವಕಿಸಲ-ತ್ಯಂತ ರೋಷದಿಂದಂ,
ಸಂತನ ಕೈ ಕೇ-ಶಾಂತದಿಲ್ಲ, ಯುವ-ನಂತರ್ಧಾನನಹೋ!

ಗದಾಶಂಖಚ-ಕ್ರಧಾರಿ, ಶ್ರೀ ಸ-ಚ್ಚಿದಾನಂದಮೂರ್ತೀ
ತದಾ ತೋರ್ದನ-ಲ್ಲಿ ದಾಮೋದರಂ,-ಸದಾನಂತಕೀರ್ತೀ!

## VI.

ಝುಗಝುಗವೊಗೆವುಗೆ-ಗಗನದಿ ನಗೆವೊಗ-ದಗಣಿತ ಭುಗಿಲಿಂದಂ,
ಸುಗುಣಗಣಗೃಹಗೆ-ಬಗೆ ಮಿಗೆ ದಿಗಿಲಡೆ,-ಚಿಗುರಿತು ಸಂದೆಗವೂ.

ಝುಕ್ಕನವನ ಪಾ-ದಕ್ಕೆರಗುತ, ಬಲು-ಕಕ್ಕಸದಿಂ ನುಡಿದಂ,—
'ಲೆಕ್ಕಿಸದಿರ್ಪುದು-ಚಿಕ್ಕ ಮನಸಿನಿಂ-ಕುಕ್ಕಿದ ವಾಕ್ಕುಗಳಂ.

'ಅಮಾನುಷನೆ! ಖಗ-ವಿಮಾನನಿಗೆ ಸರಿ-ಸಮಾನ ಮೂರುತಿಯೇ!
ಕ್ಷಮಾಪಣೆಯ ಗೆಯ್-ಪ್ರಮಾದ ವಚನವ,-ನಮೋನಮಃ' ಎಂದಂ.

ಅಕ್ಕರೆಯಲಿ ಕೈ-ಯಿಕ್ಕೆತ್ತುತಲುರೆ-ತಕ್ಕವಿಸಿದನವನಂ;
ಉಕ್ಕುವ ವೀಣೆಯ-ಮಿಕ್ಕಿತು ದನಿ; ನಸು-ನಕ್ಕು ದಿವ್ಯನುಸಿರ್ದಂ.—

'ಅಪ್ಪಂತಿರೆ ಸಾ-ರೂಪ್ಯ ಪದವಿಯೆನ-ಗೊಪ್ಪಿತು; ಶ್ರೀಧರನಾ
ಅಪ್ಪಣೆ ನಡೆಸುತ,- ತಪ್ಪದಲರಸುತ-ಲಿಪ್ಪೆನು ಸಾಯುಜ್ಯಂ.

'ನಿನ್ನಯ ಗುಣಗ-ಳ್ಳನ್ನುತಹವೆಂ-ಬುನ್ನತ ಕೀರ್ತಿಯಿದೇ;
ಎನ್ನಲು, ಸಂಶಯ-ದಿಂ ನೆರೆ ಮೋಕ್ಷವೆ-ಕನ್ನಡಿಪಣವಹುದೂ.

'ಪರಮಾತ್ಮನ ಪರ-ಚರಿತದ ಪರಿಯದ-ಪರಿಕಿಸಲೆಂತಹುದೂ?
ನರನ ವಿಮರ್ಶೆಗೆ-ದೊರಕುವುವೇ ವಿ-ಸ್ತರದ ಸಂಗತಿಗಳೂ?

'ಪಾಪಪುಣ್ಯದಾ-ಟೋಪದಿಂದಲಾ-ಕೂಪಕಚ್ಛಪನೊಲೂ
ಆಪಾದಿಸಲೇ-ನಾಪೆಯನೀತಿಯ?-ಶ್ರೀಪತಿ ಸರ್ವಜ್ಞಂ!

## VII.

'ಇದೇ ಕಂಡದಿ-ನ್ನುದಾಹರಣಮೊಂ-ದದನ್ನು ಭಾವಿಸು ನೀ!
ಉದಾತ್ತನಡೆಸುವ-ನುದಾಸೀನ ಗುಣ-ದಿ ದಾನಧರ್ಮಗಳಂ;

'ಕೀರ್ತಿಕೀರ್ತನೆಯ-ಸ್ವಾರ್ಥದಿಂದ, ಸ-ತ್ಪಾತ್ರವನರಿಯದಲೇ
ವರ್ತಿಪನು, ಕನಕ-ಪಾತ್ರನಪ್ಪುದಿ ಸಿ-ವರ್ತಕನಾಗಿರ್ಪಂ.

'ಕೃಪಣನರಿಯನೊಂ-ದುಪಕಾರವ; ಕಂ-ಡಪರಿಮಿತದ ಜಡಿಯಾ,
ಕೃಪೆ ಪುಟ್ಟಿದುದರ-ಸಫಲತೆ ತಿಳಿದಿಹ-ನು ಪರಿಗ್ರಹದಿಂದಂ.

'ಮೂರನೆ ರಾತ್ರಿಯೊ-ಳಾರೈಸಿದ ವರ-ಪೂರುಷನತಿಯೋಗ್ಯಂ,
ಮಾರಮಣನ ಪಾ-ದಾರವಿಂದದ-ಲ್ಲಾರಡಿಯಾಗಿರ್ದಂ.

ವಾರ್ಧಕದಲಿ ಜನಿ-ಸಿರ್ದ ಪಸುಳೆ ಭವ-ವಾರ್ಧಿಗೆಳೆಯಿತವನಂ,
ದುರ್ಧರೈಹಿಕ-ಸ್ಪರ್ಧೆಯ ಕಳೆದೆನು,-ಮರ್ದಿಸಿದೆನು ಕೂಸಂ.

ಚರನು ಮನೆಯೊಳೀ-ಯಿರುಳು ಧನವನಪ-ಹರಿಸಲ್ಕೆಳಸಿರ್ದಂ;
ನೆರವೇರಲ್ಕದು,-ಪರಹಿತ ಸಂಚಿತ-ಕುರಿ ಬರ್ಪುದು ನ್ಯೂನಂ.

ಶ್ರುತಿತತಿಮತಮಿತಿ,-ರತಿಪತಿಪಿತಕೃತಿ-ಹಿತವೆನೆ ಸಮ್ಮತಿಸೀ,
ಪ್ರತಿಹತಮತಿಜಿತ-ನತಿಗತಿಸುತ ಸಂ-ತತವೆ ನುತಿಸಬೇಕೂ.'

ಪಸ್ತವಿರಿಸಿ ಯತಿ-ಮಸ್ತಕದಲಿ, 'ತೇ-ಸ್ವಸ್ತಿ'ಯೆಂದು ದಿವ್ಯಂ
ಅಸ್ತಮಿಸಿದನೀ-ಪ್ರಸ್ತುತಮರ್ಪಣ-ಮಸ್ತು ನೃಸಿಂಹನಿಗೇ!

---

## ಗೋವಿಂದ ಪೈ

### ೧ 'ನಾವೆ ನಮಗಾಗಿಸುವೆವೆಮ್ಮ ಕೋಟಲೆಯಂ'

ನಾವೆ ನಮಗಾಗಿಸುವೆವೆಮ್ಮ ಕೋಟಲೆಯಂ—
ಬಾಳ್ವ ಸಂಗರರಂಗವೆಂಬುದಂ ಮರೆದು,
ಸಿಂಗರಂ ಗೆತ್ತು ಶಸ್ತ್ರಂಗಳಂ ಮುರಿದು
ವಿಧಿಗೆರೆದು ಕಡೆದೀವೆವಳಲ ಸಂಕಲೆಯಂ.

ಕಾದದೊಡೆ ಬಾಳೇಕೆ? ಕಾದೆನೆನೆ ನಿನ್ನ
ಸಂಧಿಪುದೊ? ಬಂಧಿಪುದೊ? ಬಗೆಯ ವಿಧಿಯುದರಿಂ
ಬಿಳಿಯ ಪಳವಿಗೆಯುಳವೆ? ಬಾಳನೆತ್ತುದರಿಂ
ಪಡೆವಳಂ ತಾನೆ, ಪಡೆ ತಾನೆ, ನಡೆ ಮುನ್ನ!

ಮಾರಾಂತ ವಿಧಿಗೀಯಲೇಂ ತನ್ನ ಬಿಲ್ಲಾ?
ತನ್ನಾಯುಧದಿ ತಾನೆ ಮಡಿವೆಯೇನಿಂತು?
ಹುಟ್ಟೊಡನೆ ತೊಟ್ಟ ತಾನೆಂಬಂಬನಾಂತು
ನಿನ್ನ ಹೆಸರಿಂ ಕೊರೆಯ ವಿಧಿಯೆದೆಯ ಕಲ್ಲಾ!

ನಿನ್ನವೆ ಜಯಾಪಜಯಂ? ಕಾದುವುದೆ ನಿನ್ನ—
ಕರೆಯಂಬ ಗುರಿಗೊಂಬ ವಿಧಿ ಕಾಂಬ ಮುನ್ನ!

### ೨ 'ಇನ್ನು ನೀನೆನ್ನವನು'

ಇನ್ನು ನೀನೆನ್ನವನು
ನಾನಿನ್ನು ನಿನ್ನವನು
ಇಂದಿನಿಂದೆ,
ಇಂದಿನಿಂದ ಮುಂದೆ.

ನಿನ್ನ ನೆನವುದೆ ಚನ್ನ,
ನಿನ್ನ ಕನವುದೆ ನನ್ನ
ದಿನದ ಬಾಳು,
ನನ್ನ ಮನದ ಕೂಳು.

ಮಳೆಯೆ ಬೇಸಗೆಯಾಸೆ
ಯಂತೆ ನನ್ನ ಪಿಪಾಸೆ
ಯೆದೆಯು ನೀನೆ
ತಣಿಪ ಸೊದೆಯು ಸೋನೆ.

ಮುಚ್ಚುಕಿಟಿಕಿಯ ಮುಂತೆ
ಕಾವ ತಂಬೆಲರಂತೆ
ನನ್ನ ಕಾವೆ
ಮನದಿ ನಿನ್ನ ತೀವೆ.

ತನ್ನ ದೃಷ್ಟಿಯು ಕಾಣ
ದಂಬಕದೊಳೇಂ ಜಾಣ
ನೆನ್ನ ಬಳಿಯೆ
ಸುಳಿವ ನಿನ್ನ ತಿಳಿಯೆ?

ಒಳಮಿಂಚು ಹೊರಮಿರುಗು
ವರಮುಂಬುದಂ ತಿರುಗು
ವಂತೆ ನಿನ್ನ
ನರಿಯುದಾಂತೆ ಬನ್ನ.

ಜೇನನಿಳಿಸದ ಮುನ್ನ
ಜ್ಯೋತಿ ಮಯಣದೊಳೆನ್ನ?
ಮೋಹವಿಳಿಸು
ನಿನ್ನ ನೇಹ ಬೆಳಸು.

ನಿನ್ನ ಗುರುತೆದೆಗಿಲ್ಲ
ದೆಡನಾಣ್ಯವಿದು ಸಲ್ಲ
  ದೊತ್ತು ನಿನ್ನ
ಆಚ್ಚನೆತ್ತು ನನ್ನ.

ಸುಡಿಗೆ ಬಾರದ ಬಾಸೆ
ಯಿಂದ ಬೇಡುವುದಾಸೆ
  ನಿನ್ನ ನೋಡೆ,
ನಿನಗೆ ನನ್ನ ನೀಡೆ.

ರವಿಯು ತೋರಿಸೆ ರವಿಯೊ?
ಮಿಣುಕು ಬತ್ತಿಯು ಛವಿಯೊ?
  ನೋಡಲೆನ್ನ
ಮನಕೆ ಮೂಡು ಮುನ್ನ.

ಹಗಲೊಡನೆ ಮಸೆವಂತೆ
ಇರುಳೆ ಹಗಲಿಸುವಂತೆ,
  ನಿನ್ನ ಮಲಿವೆ
ನಾದಡೆನ್ನ ಕಲಿವೆ.

ತಂದೆ ಗದ್ದಿಸದೆನ್ನ,
ತಾಯಿ ಮುದ್ದಿಸುತೆನ್ನ
  ಕೇಡ ಮರೆಯು,
ನನಗೆ ನೀಡ ಮರೆಯು.

ನಿನ್ನನಲ್ಲದೆ ಸಲ್ಲ
ದೇನ ನಿನ್ನೊಡನೆಲ್ಲ
  ಬೇಡಲಿಲ್ಲ!
ನಿನ್ನ ಕಾಡಲಿಲ್ಲ!

ಇಲ್ಲವೆನದದನೆಲ್ಲ
ನನಗೊದವಿಸಿದೆಯಲ್ಲ!
  ಎರೆದೆನೆಂತು
ದೂರವರಿದೆನಂತು!

ಇನ್ನಾವುದಂ ಬೇಡ
ಲೊಲ್ಲೆ; ನನಗೇಂ ಬೇಡ—
  ಬೇಡಲಿಂತು
ನಿನ್ನ ಕೂಡಲೆಂತು?

ಏನೆನಗೆ ಬೇಕಿಲ್ಲ,
ನೀನೆನಗೆ ಸಾಕಲ್ಲ?
  ನೀನೆ ಬೇಕು
ನನಗೆ ನೀನೆ ಸಾಕು.

## ೩ 'ಈ ಜನುಮವೆ ಮುಗಿವ ಮುನ್ನ'

ಈ ಜನುಮವೆ ಮುಗಿವ ಮುನ್ನ
ಕಾಣೆನೊ ಕಾಣುವೆನೊ ನಿನ್ನ
ನರಿಯದೊಡಮುಭಿನ್ನವೆನ್ನ
  ಮನದ ತಿತಿಕ್ಷೆ
ಇಂದಲ್ಲಡೆ ಮುಂದೆ ನೆರೆಯು
ದಿರದಿಲ್ಲಿಯೆ ಬಲ್ಲೆನೆರೆಯ—
ಸಲದೆ ತಾಯ ಬಸಿರ ಮರೆಯು
  ಮಗುವ ದಿದೃಕ್ಷೆ?

ನಿನ್ನೊಳೊಗೆದ ನನ್ನೊಳಿಂತು
ನಿನ್ನ ಕಾಂಬ ಬಯಕೆ ಬಂತು,
ಕಡಲಾಳದ ತೆರೆಯೊಳೆಂತು
  ಕಡಲ ಕಾಣಿಕೆ;

ನನಗೀ ಜನುಮದಿ ಪ್ರಸನ್ನ
ನಹುದು ಕಣಾ ಹೊಣೆಯೆ ನಿನ್ನ,
ಕಡಲ ಹೊಣೆಯದೆಂತು ತನ್ನ
ತೆರೆಯ ಪೊಣಿಕೆ.

ನಾನಿದೊ ಬರಿ ಬಾಷ್ಪದಂಧು,
ನೀನೊಡೆಯಾ ದಯಾಸಿಂಧು—
ನಿನ್ನಿಂದ ಸಮೀಪಬಂಧು
ವಾರೊಳರಿನ್ನ?
ಇಂತೆನೆ ಮೊಗಮರಸಿ ಬೆಂಗೆ
ಬಂದಡೆ ಮೊಗ ಮರಸೆ ಹಂಗೆ?
ಎನ್ನೆಗಮಿಂತೆನ್ನ ಕಂಗೆ
ಮಾಚುವೆ ನಿನ್ನ?

ಜನನದಿ ಮರಣಾಂತಮಿಲ್ಲಿ
ಬಾಳ್ವೆ ನಿನ್ನನರಸುವಲ್ಲಿ,
ನೋಡದಿಲ್ಲಿ ಕೂಡಲಲ್ಲಿ
ಬಲ್ಲುದೆ ನಿನ್ನ?
ಮರಳಿ ತನ್ನ ಹೊರಟ ರೇವ
ನಯ್ದಿ ಸುತ್ತಿ ಬರುವ ನಾವ
ಮಿಳಿಸಿತೆ ಹಾಯದರ ನೋವ
ಕಾಣದ ಮುನ್ನ?

ಉದಯಾಸ್ತಂ ಬಡೆವ ಖರ್ವ
ಗತಿಯಂತಿನನೊಡನೆ ಪರ್ವ
ವಡೆವ ಗತಿಯುಮೆಂತು ಶರ್ವ
ರೀಶಗೆ ದ್ವಿಧಾ

ಜೀವನದಿಂದಂತು ಭಿನ್ನ
ಪಥಮೆನಗಿಲ್ಲಿರಲಖಿನ್ನ
ಮುದಂ ನಡೆವಗೆಂತು ನಿನ್ನ
ದರ್ಶನಂ ಮುಧಾ?

ಬಾಳ್ವೆಯು ನಿಡುಮುರಳಿನಲ್ಲಿ
ಸುಖದಿಂ ದಣಿದೊಣಗಿದಲ್ಲಿ
ನಡುದೀವಿಗಳಳಲೊಳಲ್ಲಿ
ಕಾವನಾವನಿಂ
ಕಂಬನಿಯಾತಿಥ್ಯ ದೊರೆತೆ
ನವನ ಮುಂದುವರಿಯೆ ಮರೆತೆ—
ನಿನ್ನಿಂದವನಕಟ ಪೆರತೆ?
ಪೇಳ ದೇವ ನೀಂ!

ನಿನ್ನನಿಲ್ಲಿ ನಮಗೆ ತೋರ
ಲಲ್ಲಡಳಲು ಬರಿದೆ ಬಾರ;
ಕಂಡ ನಿನ್ನ ನೋಡಲಾರ
ದೆನ್ನ ಕಣ್ಣಿಗೆ
ಬಲ್ಲೆನಿಲ್ಲೆ ಕಾಣಬರುವೆ—
ಎಂದೊ ಎಂತೊ ನೀನೆ ಅರಿವೆ,
ಬಗೆಗೆ ಕಾವ ಕವಿಯೊಲಿರುವೆ
ನಿಂತು ತಣ್ಣಗೆ.

ಬಲ್ಲೆನೆಂತು ಬಾಳ್ವೆ ಸಂದು
ನಿನ್ನೊಳೆ ಮೆಯ್ಗರೆವೆನೆಂದು,
ಬಲ್ಲೆನಂತು ಬಾಳುವಂದು
ಕಾಣುವೆ ನಿನ್ನ,
ರವಿಯಲಿ ಮೆಯ್ಗರೆವ ಮುಂತು
ಹುಣ್ಣಿಮೆಯಮೃತಾಂಶು ನಿಂತು
ಮುಖಾಮುಖಿಯೆ ಕಾಣುವಂತು
ಭಾಸ್ಕರನನ್ನ.

## ೪ 'ಸರಿಗೆಯುಲಿ ಸಿಲುಕುತಿದೆ'

ಸರಿಗೆಯುಲಿ ಸಿಲುಕುತಿದೆ
  ಹೃದಯುಸ್ವರಂ,
ಹೃದಯುದಲಿ ಕಲುಕುತಿದೆ
  ವಿರಹಜ್ವರಂ;
ಎತ್ತ ನಡೆದವನೆಂದು
ಮತ್ತೆನಗೆ ಬಹನೆಂದು
  ಮನಸಿನೋಪಂ,
ಬಾಗಿಲೊಳೆ ನಿಲುಕುತಿದೆ
  ನಯುನ ದೀಪಂ.

ಮರಳುವೊಸಗೆಯು ಬೀರಿ
  ಗುಡುಗು ಮೊಳಗೆ,
ಮನೆಯು ದಾರಿಯು ತೋರಿ
  ಮಿಂಚು ತೊಳಗೆ,
ಬಂದರೆಲ್ಲಿದರೆಲ್ಲ,
ನೀನನಿತೆ ಬಂದಿಲ್ಲ
  ವೇಕೆ ನಲ್ಲ?
ಮುಗಿಲ ಸಜ್ಜೆಯು ಭೇರಿ
  ಕೇಳಿಸಿಲ್ಲ?

ಬಸಿರೊಳೆಮ್ಮೆಯು ಕೂಸು
  ಬಂದಂದಿನಿಂ,
ನವಿಲ ಮದುವೆಯು ಲೇಸು
  ಸಂದಂದಿನಿಂ,
ತೆರಳಿನ್ನು ಮರಳಿಲ್ಲ;
ನಿನ್ನೊಸಗೆ ನನಗಿಲ್ಲ
  ದೊಲಿವೆನಿಲ್ಲಿ,
ಗೂಡುಬೆಳಕೊಲು ಬೀಸು
  ವಿರುಳಿನಲ್ಲಿ.

ಹಾಲನೂಡಿಸೆ ಹುಬ್ಬೆ
ಹಸುಳೆ ತೆನೆಗೆ,
ಬತ್ತಿದೆದೆಯುಕಟಬ್ಬೆ
ಗಿಹುದೆ ನನಗೆ?
ನುಡಿಗೆ ನುಡಿ ಮೂಡಿಲ್ಲ,
ನುಗುವಿನಡಿ ಕೂಡಿಲ್ಲ
ದನಿತರೊಳಗೆ
ಸೆಳೆದಳದನಿಳೆ ತಬ್ಬೆ
ತನ್ನ ಬಳಿಗೆ.

*   *   *   *

ಎದೆಯ ಬಯಕೆಯು ಗನಿಯೊ
ಳೊಗೆದ ರನ್ನ
ಎವೆಯುನೊಲ್ಲದ ಹನಿಯೊ
ಲುದುರಿತೆನ್ನ!
ಇಲ್ಲಿ ನೀನಿರೆ, ನಲ್ಲ,
ಅಂತಾಗುತಿರಲಿಲ್ಲ —
ಇನನಿಲ್ಲದೆ
ಕಮಲವಮದು ಕಮಲಿನಿಯೊ
ಳಿರಬಲ್ಲುದೆ?

ಬರದಿ ನೀರಗೆವಲ್ಲಿ
ನಿಧಿಯನೆಟಕಿ
ಪಡೆದಣುಗನೊಗೆದಲ್ಲಿ
ವಿಧಿಯು ಕಟಕಿ
ಗಿಡುಗನೆನೆ ಮರಿಗಿಳಿಯ
ತುಡುಗೆ ನೀನಿರೆ ಬಳಿಯ
ಲಿಂದು, ನಲ್ಲ,
ಚಿಲಿಮಿಲಿವ ಗೂಡಲ್ಲಿ
ಮೌನವಲ್ಲ!

ಬಳ್ಳಿಗೆಲ್ಲವ ಸಲ್ಲಿ
   ಸುವಳೆ ಧರಣಿ?
ಬೆಳಕವಳಿಗಕಟೆಲ್ಲಿ
   ತರದೆ ತರಣಿ?
ಧರಣಿಯಕ್ಕರೆ ಸವಿಸೆ,
ತರಣಿ ಮೋರೆಯುನವಿಸೆ,
   ಬಳ್ಳಿ ತಾರೆ,
ತಂದೆ ತಾಯುವರಲ್ಲಿ
   ಯಾರ ದೂರೆ?

ಕುರುಡನರಗನಸಂತೆ
   ಒಗೆದು ಬೇಯೆ,
ಗರಿಮುರಿದ ಖಗದಂತೆ
   ನೆಗೆದು ನೋಯೆ,
ನನ್ನ ಬಾಳಕಟಿನಿಸೆ?
ಹಣ್ಣು ಹುಳುವಿನ ತಿನಿಸೆ?
   ಎದೆಯ ತಿರುಳು
ಕೊರೆಯೆ ಸೋರುವ ಚಿಂತೆ
   ಹಗಲು ಇರುಳು!

* * * *

ಸರಿದೊಮ್ಮೆ ಬರಸಲ್ಲ
   ದಲರಿನಳಿವೊ?
ಸರಿದಂತೆ ಬರಬಲ್ಲ
   ಉಡುವಿನಿಳಿವೊ?
ಮರುತರಂಗಿಪ ತೆರೆಯೊ?
ಹುಳು ಪತಂಗಿಪ ಸೆರೆಯೊ?
   ಮರಳಿ ಚನ್ನ
ಬಹನೆ, ಬಾರನೆ, ನಲ್ಲ,
   ಬಸಿರೊಳೆನ್ನ?

ಎಳೆಯೊಳಿಂಗಿದ ಗೀತಿ
ಮಾರುಲಿಸದೆ,
ಸೊಡರೊಳಾರಿದ ಜ್ಯೋತಿ
ಮಾರುರಿಸದೆ,
ಮರುಕಣಿಸಲೆಂತೆರೆಯು?
ಮರಳಿ ಮುದ್ದಿನ ಮರಿಯು
ನಳವೆ ದೊರೆಯೆ?
ಮುತ್ತು ಮೊಳೆವುದೆ ಸ್ವಾತಿ
ಗಿರಿಯೊಳೆರೆಯೆ?

ಕೋರಿಕೆಯೊಳಡಿಮೆಟ್ಟಿ
ಮುಂದೆ ಪಾರೆ,
ಶಂಕೆ ಹಾವಸೆಗಟ್ಟಿ
ಮನಸು ಜಾರೆ,
ಮೇಡ ಮೇವನೆ ಮೇವ
ಕಟ್ಟುಕಂಬದ ಗೋವ
ತೆರದೊಳೆನ್ನ
ನೆನದ ನೆನವೊಳೆ ದಿಟ್ಟಿ
ಗೊಳುವೆ ನಿನ್ನ.

ಬಲೆಯು ನೀರಲಿ ಸುತ್ತ
ಬರುವ ತನ್ನ
ನೆಳಲನಿನೆಯುಂ ಗೆತ್ತ
ಮೀನೊಲೆನ್ನ
ಮನದಿ ಸುಳಿಯುವ ನಿನ್ನ
ನೆನವೆ ನೀನೆನುತೆನ್ನ
ದಿನವ ಕಳೆವೆ—
ಕರೆ ಎತ್ತ ತೆರೆಯತ್ತ
ಮರಳದೊಳವೆ?